## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

IN THE COURT OF AUTHORISIED OFFICER AND DEPUTY CONSERVATOR OF FORESTS, KARWAR DIVISION, KARWAR

**ಕ್ರ.ಸಂ:ಬಿ1/ಎಫ್‌ಓಸಿ/ವಿವ-7/2008-09 ಕಾರವಾರ, ದಿನಾಂಕ:06-12-2013.**

**ಫಿರ್ಯಾದುದಾರರು: ವಿರುದ್ಧ ಅರ್ಜಿದಾರರು:**

ಪೊಲೀಸ್ ನಿರೀಕ್ಷಕರು, ಕದ್ರಾ . ಶ್ರೀ. ಅನಿಲ್ ಕಾಶೀನಾಥ ಕಾಂಬಳೆ

ಸಾ: ಹೋಟೆಗಾಳಿ, ಬಂದರವಾಡಾ, ಅಸ್ನೋಟಿ,

ತಾಲೂಕು: ಕಾರವಾರ (ಉ.ಕನ್ನಡ)

**ಪ್ರಸ್ತಾವನೆ:**

1. ಪೊಲೀಸ್ ವೃತ್ತ ನಿರೀಕ್ಷಕರು, ಕದ್ರಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 28-04-2009 ರಂದು ವರದಿ ಒಪ್ಪಿಸುತ್ತಾ ದಿನಾಂಕ: 30-03-2009 ರಂದು ಕದ್ರಾ ಸಾಕಳಿ ನದಿಯ ಸೇತುವೆ ಸಮೀಪ ಅರಣ್ಯದಲ್ಲಿ ಅಕ್ರಮವಾಗಿ ಸಾಗವಾನಿ ತುಂಡುಗಳು ದಾಸ್ತಾನು ಮಾಡಿದ ಬಗ್ಗೆ ಬಂದ ಖಚಿತ ಮಾಹಿತಿ ಮೇರೆಗೆ ಪೊಲೀಸ್ ಸಬ್‌ಇನ್ಸ್‌ಫೆಕ್ಟರ್, ಕದ್ರಾ ಹಾಗೂ ಕದ್ರಾ ಪೊಲೀಸ್ ಠಾಣೆಯ ಸಿಬ್ಬಂದಿಗಳು ಸದರ ಸ್ಥಳದಲ್ಲಿ ಸಾಗವಾನಿ ಜಾತಿಯ 12 ತುಂಡುಗಳನ್ನು ಜಪ್ತುಪಡಿಸಿಕೊಂಡಿದ್ದು ಈ ಪ್ರಕರಣದಲ್ಲಿ ಆರೋಪಿ ಶ್ರೀ. ಅನಿಲ್ ಕಾಶೀನಾಥ ಕಾಂಬಳೆ, ಸಾ: ಹಣಕೋಣ ತಾಲೂಕು: ಕಾರವಾರ ಇವರನ್ನು ದಸ್ತಗಿರಿ ಮಾಡಿ ಆರೋಪಿಯ ಹೇಳಿಕೆಯ ಮೇರೆಗೆ ದಿನಾಂಕ: 02-04-2009 ರಂದು 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469ನೇದರಲ್ಲಿ ಅಕ್ರಮವಾಗಿ ಇನ್ನೂ 2 ಸಾಗವಾನಿ ಹಾಗೂ 1ಸೀಸಂ ಒಟ್ಟೂ 03 ತುಂಡುಗಳು ತುಂಬಿದ್ದು ಇವುಗಳನ್ನು ಸಹ ಜಪ್ತುಪಡಿಸಿಕೊಂಡು ಈ ಬಗ್ಗೆ ಅರಣ್ಯ ಗುನ್ನೆಯನ್ನು ಪೊಲೀಸ್ ಸಬ್ ಇನ್ಸ್‌ಫೆಕ್ಟರ್, ಕದ್ರಾ ಪೊಲೀಸ್ ಠಾಣೆ ಪ್ರಥಮ ಮಾಹಿತಿ ವರದಿ ಸಂಖ್ಯೆ: 8/2009, ದಿನಾಂಕ: 309-03-2009 ರ ಪ್ರಕಾರ ಗುನ್ನೆ ದಾಖಲಿಸಿಕೊಂಡಿರುತ್ತಾರೆ. ಈ ಪ್ರಕರಣದಲ್ಲಿ ಜಪ್ತುಪಡಿಸಲಾದ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಹಾಗೂ ಸಾಗವಾನಿ ತುಂಡುಗಳು 14=2.221 ಘ.ಮೀ. ಹಾಗೂ ಸೀಸಂ ತುಂಡು 1=0.023 ಘ.ಮೀ. ಇವುಗಳನ್ನು ಪ್ರಥಮ ಮಾಹಿತಿ ವರದಿ, ಅಮಾನತ್ತು ವರದಿ ಹಾಗೂ ಅಪರಾಧ ಸ್ಥಳದ ಪಂಚನಾಮೆ ಮತ್ತು ಜಪ್ತ ಪಂಚನಾಮೆಯೊಂದಿಗೆ ಪೊಲೀಸ್ ವೃತ್ತ ನಿರೀಕ್ಷಕರು, ಕದ್ರಾ ಇವರು ಈ ನ್ಯಾಯಾಲಯಕ್ಕೆ ದಿನಾಂಕ: 28-04-2009 ರಂದು ಹಾಜರುಪಡಿಸಿರುತ್ತಾರೆ.

ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 28-04-2009ರಂದು ಸದರ ಜಪ್ತುಪಡಿಸಿದ ವಾಹನ ಮತ್ತು ಸಾಗ/ಸೀಸಂ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಕಾರವಾರ ಇವರಿಗೆ ವಹಿಸಿಕೊಡಲಾಗಿದೆ.

2. ಸದರ ಜಪ್ತ ವಾಹನದ ಕುರಿತು ಈ ನ್ಯಾಯಾಲಯದಿಂದ ದಿನಾಂಕ: 16-05-2009 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರಿಗೆ ಪತ್ರ ಬರೆದು 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469ನೇದನ್ನು ಅರಣ್ಯ ಅಪರಾಧದಲ್ಲಿ ಪೊಲೀಸ್ ಉಪನಿರೀಕ್ಷಕರು ಜಪ್ತುಪಡಿಸಿ ಗುನ್ನೆ ದಾಖಲಿಸಿಕೊಂಡು ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಹಿನ್ನೆಲೆಯಲ್ಲಿ ಸದರ ವಾಹನದ ಮಾಲೀಕತ್ವದ ವಿವರವನ್ನು ಒದಗಿಸುವಂತೆ ತಿಳಿಸಲಾಗಿದೆ. ಈ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರವಾರ ಇವರ ವರದಿ ದಿನಾಂಕ: 02-06-2009 ರ ಪ್ರಕಾರ ಸದರ ವಾಹನದ ಮಾಲೀಕರು ಶ್ರೀ. ಅನಿಲ್ ಕಾಶೀನಾಥ ಕಾಂಬಳೆ, ಸಾ: ಹೋಟೆಗಾಳಿ, ಬಂದರವಾಡ, ಅಸ್ನೋಟಿ, ತಾಲೂಕು: ಕಾರವಾರ ಎಂದು ವರದಿ ಒಪ್ಪಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ದಿನಾಂಕ: 22-06-2009 ರಂದು ಸದರ ವಾಹನದ ಮಾಲೀಕ ಹಾಗೂ ಆರೋಪಿತರಾದ ಶ್ರೀ. ಅನಿಲ್ ಕಾಶೀನಾಥ ಕಾಂಬಳೆ, ಸಾ: ಹೋಟೆಗಾಳಿ, ಬಂದರವಾಡ, ಅಸ್ನೋಟಿ ಇವರಿಗೆ ನೋಟೀಸು ಜಾರಿಗೊಳಿಸಿ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಅರಣ್ಯ ಗುನ್ನೆಯಲ್ಲಿ ತೊಡಗಿಸಿಕೊಂಡಿರುವ ಬಗ್ಗೆ ಪೊಲೀಸ್ ಸಬ್ ಇನ್ಸ್‌ಫೆಕ್ಟರ್, ಕದ್ರಾ ಇವರು ಗುನ್ನೆ ದಾಖಲಿಸಿ ಈ ಪ್ರಾಧಿಕಾರದಲ್ಲಿ ಹಾಜರುಪಡಿಸಿರುವದರಿಂದ ಸದರ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸೂಕ್ತ ಪ್ರಕರಣವಾಗಿರುವದರಿಂದ ನಿಮ್ಮ ಮಾಲೀಕತ್ವದ ಸದರ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು? ಎಂದು ತಿಳಿಸಿ ನೋಟೀಸು ಮುಟ್ಟಿದ 07 ದಿವಸದೊಳಗಾಗಿ ಈ ನ್ಯಾಯಾಲಯಕ್ಕೆ ಉತ್ತರವನ್ನು ಸಲ್ಲಿಸಲು ತಿಳಿಸಲಾಗಿತ್ತು. ಆದರೆ, ಈ ಗುನ್ನೆಗೆ ಸಂಬಂಧಿಸಿದ ವಾಹನದ ಮಾಲೀಕರು/ಗುನ್ನೆಗಾರರು ಸದರ ನೋಟೀಸನ್ನು ಸ್ವೀಕರಿಸಿದ್ದು ಇರುವುದಿಲ್ಲ. ಮತ್ತು ಅವರ ಪರವಾಗಿ ಯಾವುದೇ ವಕೀಲರ ಮುಖಾಂತರ ಅರ್ಜಿಯನ್ನು ಕೂಡ ಈ ನ್ಯಾಯಾಲಯಕ್ಕೆ ಸಲ್ಲಿಸಿದ್ದು ಇರುವುದಿಲ್ಲ.

3. ಸದರ ಪ್ರಕರಣದ ವಿಚಾರಣೆಯನ್ನು ದಿನಾಂಕ: 21-06-2012, 25-07-2012, 28-08-2012, 25-09-2012, 04-10-2012, 08-11-2013 ಮತ್ತು 21-11-2013 ರಂದು ಈ ನ್ಯಾಯಾಲಯದಲ್ಲಿ ಇಡಲಾಗಿ, ಫಿರ್ಯಾದಿದಾರರಾಗಲಿ, ಆರೋಪಿತರಾಗಲಿ ಹಾಜರಾಗಿದ್ದು ಇರುವುದಿಲ್ಲ.

ಈ ಪ್ರಕರಣದ ಎಲ್ಲಾ ಲಿಖಿತ ದಾಖಲೆಗಳು ಪರಿಶೀಲಿಸಿದ ನಂತರ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಅ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ/ಸೀಸಂ ತುಂಡುಗಳು ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ?

ಆ) ಈ ಮೇಲೆ ನಮೂದಿಸಿದ ಸಾಗ/ಸೀಸಂ ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಉಪಯೋಗ ಮಾಡಲಾಗಿದೆಯೇ?

ಇ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) -- ಹೌದು

ಅಂಶ ನಂ. (ಆ) -- ಹೌದು

ಅಂಶ ನಂ. (ಇ) -- ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ಅಂಶ ನಂ. (ಅ)**

ಪೊಲೀಸ್ ಸಬ್ ಇನ್ಸ್‌ಫೆಕ್ಟರ್, ಕದ್ರಾ ಇವರ ಪ್ರಥಮ ಮಾಹಿತಿ ವರದಿ ಸಂಖ್ಯೆ:8/2009 ದಿನಾಂಕ: 30-03-2009 ದನ್ವಯ ಅರಣ್ಯ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡ ಮುದ್ದೆಮ್ಮಾಲು

1) 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469

2) ಸದರ 407 ಮಾದರಿಯ ಟೆಂಪೋ ವಾಹನದಲ್ಲಿ ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೇ ಅಕ್ರಮವಾಗಿ ಸಾಗಿಸುತ್ತಿದ್ದ ಸಾಗವಾನಿ ತುಂಡುಗಳು 14=2.221 ಘ.ಮೀ. ಹಾಗೂ ಸೀಸಂ ತುಂಡು 1=0.023 ಘ.ಮೀ. ಮತ್ತು ವಾಹನದ ಚಾಲಕ ಹಾಗೂ ಮಾಲೀಕ ಇವರನ್ನು ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಒಳಪಡಿಸಲಾಗಿದೆ.

**ಸದರಿಯವರು ಹಾಜರುಪಡಿಸಿದ**

1) ಪೊಲೀಸ್ ವೃತ ನಿರೀಕ್ಷಕರು ಕದ್ರಾ ಇವರ ವರದಿ
2) ಆರೋಪಿ ಸಮಕ್ಷಮ ಪಂಚನಾಮೆ ಮತ್ತು ಪಂಚನಾಮೆಯಲ್ಲಿ ಆರೋಪಿ ಸಹಿ ಪರಿಶೀಲಿಸಲಾಗಿದೆ.
3) ಎಫ್.ಐ.ಆರ್. ಸಂಖ್ಯೆ: 8/2009, ದಿನಾಂಕ: 30–03–2009

ಈ ಪ್ರಕರಣದ ವಾಹನದ ಮಾಲೀಕರು/ಗುನ್ನೆಗಾರರಾದ ಶ್ರೀ. ಅನಿಲ್ ಕಾಶೀನಾಥ ಕಾಂಬಳೆ ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 22–06–2009 ರಂದು ನೋಟೀಸು ಜಾರಿಗೊಳಿಸಿ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಮೇಲಿನ ಗುನ್ನೆಯಲ್ಲಿ ಭಾಗಿಯಾಗಿರುವ ಬಗ್ಗೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ತಿಳಿಸಿ 7 ದಿವಸದೊಳಗಾಗಿ ಈ ನ್ಯಾಯಾಲಯಕ್ಕೆ ಉತ್ತರಸಲ್ಲಿಸಲು ತಿಳಿಸಲಾಗಿತ್ತು. ಆದರೆ, ಆರೋಪಿತರು/ವಾಹನ ಮಾಲೀಕರು ಈ ನ್ಯಾಯಾಲಯದ ಆದೇಶವನ್ನು ಸ್ವೀಕರಿಸಿದ್ದು ಇರುವದಿಲ್ಲ. ಹಾಗೆಯೇ, ಮೇಲಿನ ದಿನಾಂಕದಂದು ಈ ನ್ಯಾಯಾಲಯಕ್ಕೆ ವಿಚಾರಣೆ ವೇಳೆಯಲ್ಲಿ ಹಾಜರಾಗಿದ್ದು ಇರುವುದಿಲ್ಲ. ಮತ್ತು ಅವರ ಪರವಾಗಿ ವಕೀಲರನ್ನು ಸಹ ನೇಮಿಸಿಕೊಂಡಿದ್ದು ಇರುವದಿಲ್ಲ. ಆದ್ದರಿಂದ ಪೊಲೀಸ್ ಉಪ ನಿರೀಕ್ಷಕರ ವರದಿ ಮತ್ತು ಪ್ರಥಮ ಮಾಹಿತಿ ವರದಿ, ಪಂಚನಾಮೆ ಇತ್ಯಾದಿ ದಾಖಲೆಗಳನ್ನು ಪರಿಶೀಲಿಸಿದಂತೆ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಸದರ ಗುನ್ನೆಯಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆಂಬ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ 407 ಮಾದರಿಯ ಟೆಂಪೋ ವಾಹನ ಸಂಖ್ಯೆ: KA-30/469 ಮತ್ತು ಅದರಲ್ಲಿದ್ದ ಸಾಗವಾನಿ ತುಂಡುಗಳು 14=2.221 ಘ.ಮೀ. ಹಾಗೂ ಸೀಸಂ ತುಂಡು 1=0.023 ಘ.ಮೀ. ಮ್ಹಾಲನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

**ವಾಹನದ ವಿವರ:**

| | | | |
|---|---|---|---|
| 1) | ನೋಂದಣಿ ಸಂಖ್ಯೆ | : | KA-30/469 |
| 2) | ಇಂಜಿನ್ ನಂಬರ | : | P-21522499 |
| 3) | ಚೆಸ್ ನಂಬರ | : | KA-30/1206 |
| 4) | ವಾಹನದ ಮಾದರಿ | : | 407 ಮಾದರಿಯ ಟೆಂಪೋ (ನಾಲ್ಕು ಗಾಲಿ) |

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 06–12–2013 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**
ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಕಾರವಾರ ವಿಭಾಗ, ಕಾರವಾರ.

**PR.79**
**SC.5**

## ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಇವರ ನ್ಯಾಯಾಲಯ

**IN THE COURT OF AUTHORISIED OFFICER AND DEPUTY CONSERVATOR OF FORESTS, KARWAR DIVISION, KARWAR**

**ಕ್ರ.ಸಂ:ಎಸ್1/ಎಫ್ಓಸಿ/ವಿವ–28/2001–02 ಕಾರವಾರ, ದಿನಾಂಕ:06–12–2013.**

**ಫಿರ್ಯಾದುದಾರರು:** **ವಿರುದ್ಧ** **ಅರ್ಜಿದಾರರು:**

ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ.

ಚಂದ್ರಕಾಂತ ಕೃಷ್ಣಾ ತಾಂಡೇಲ
ಸಾ: ಗಂಗಾವಳಿ ಪೋಸ್ಟ್: ನಾಡುಮಾಸ್ಕೇರಿ,
ತಾಲೂಕು: ಕುಮಟಾ (ಉ.ಕನ್ನಡ)

**ಪ್ರಸ್ತಾವನೆ:**

1. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ಪ್ರಾಧಿಕಾರಕ್ಕೆ ದಿನಾಂಕ: 20–02–2001 ರಂದು ವರದಿ ಸಲ್ಲಿಸುತ್ತಾ ಮಾಸ್ತಿಕಟ್ಟಾ ವಲಯದಿಂದ ಸುಂಕಸಾಳ ಕಡೆಗೆ ರಾತ್ರಿ 2.00 ಘಂಟೆಗೆ ಸಿಬ್ಬಂದಿ ಜೊತೆಗೆ ಸರ್ಕಾರಿ ವಾಹನ ಸಂಖ್ಯೆ: KA-30/G-31 ಮೂಲಕ ಗಸ್ತು ತಿರುಗುವಾಗ ಬಿಳಿ ಬಣ್ಣದ ಟಾಟಾಮೊಬೈಲ್ ಗಾಡಿಯಲ್ಲಿ ಹಿಂಬದಿಗೆ 2–3 ಜನ ಸಂಶಯಾಸ್ಪದ ಕಂಡು ಬಂದು ಸದರ ಗಾಡಿಯನ್ನು ನಿಲ್ಲಿಸಲು ಹಿಂಬಾಲಿಸಿಕೊಂಡು ಹೋಗುತ್ತಿದ್ದಂತೆ ಸದರ ವಾಹನದಲ್ಲಿರುವ ಜನರು 2 ಸಾಗವಾನಿ ತುಂಡುಗಳನ್ನು ರಸ್ತೆ ಮೇಲೆ ಉರುಳಿಸಿ ಮುಂದಕ್ಕೆ ಹೋದಂತೆ ಅವರನ್ನು ಬೆನ್ನಟ್ಟಿ ಮುಂದುವರಿದಂತೆ ಸದರ ವಾಹನವನ್ನು ಅಟಕಾಯಿಸುವಷ್ಟರಲ್ಲಿ ಎರಡು ಜನರು ಪರಾರಿಯಾಗಿದ್ದು ಒಬ್ಬ ಆರೋಪಿ ಶ್ರೀ. ಉದಯ ಬೀರಪ್ಪ ಹರಿಕಾಂತ, ಸಾ: ಹೊಸಕಂಬಿ ಇವರನ್ನು ದಸ್ತಗಿರಿ ಮಾಡಲಾಗಿ, ಪರಾರಿಯಾದ ವಾಹನದ ವಿಚಾರವಾಗಿ ದಸ್ತಗಿರಿ ಮಾಡಲಾದ ಆರೋಪಿಯಿಂದ ಹೆಚ್ಚಿನ ತನಿಖೆಗೆ ಒಳಪಡಿಸಿ ಸದರ ವಾಹನ ಸಂಖ್ಯೆ: GA-01/W-1148 ಬಿಳಿ ಬಣ್ಣದ ಟಾಟಾಮೊಬೈಲ್ ಆಗಿದ್ದು ಇದರ ಮಾಲೀಕ ಮತ್ತು ಚಾಲಕ ಚಂದ್ರಕಾಂತ ಕೃಷ್ಣ ತಾಂಡೇಲ, ಸಾ: ಗಂಗಾವಳಿ, ಗೋಕರ್ಣ ಆಗಿರುವದನ್ನು ಖಚಿತಪಡಿಸಿಕೊಂಡು ಸದರ ವಾಹನದ ಶೋಧ ಕಾರ್ಯ ಮಾಡಲಾಗಿ ಈ ವಾಹನವು ಕಾರವಾರ ಕಡೆಗೆ ಬಂದಿರುವದಾಗಿ ತಿಳಿದುಬಂದಂತೆ ಎಸ್.ಪಿ ಕಚೇರಿ, ಕಾರವಾರ ಬದಿಯಲ್ಲಿ ನಿಂತಿದ್ದನ್ನು ಗಮನಿಸಿ ಅಲ್ಲಿಂದ ವಾಹನ ಮತ್ತು ವಾಹನದ ಮಾಲೀಕ/ಚಾಲಕ ಚಂದ್ರಕಾಂತ ಕೃಷ್ಣಾ ತಾಂಡೇಲ ಇವರನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿ ಜಪ್ತಪಡಿಸಲಾದ ಸಾಗ ನಗಗಳು 15=0.941 ಘ.ಮೀ., ಸೀಸಂ ನಗಗಳು 2=0.178 ಘ.ಮೀ. ಮತ್ತು ವಾಹನವನ್ನು ಜಪ್ತಮಾಡಿ ಪ್ರಥಮ ಮಾಹಿತಿ ವರದಿ ಸಂಖ್ಯೆ: 03/2000–01 ದಿನಾಂಕ: 20–02–2001 ರಂತೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (e), 62, 71A, 80, 104D ಮತ್ತು ಕರ್ನಾಟಕ ಫಾರೆಸ್ಟ್ ರೂಲ್ 1969 Rule No:144, R/W, 165 ಪ್ರಕಾರ ಗುನ್ನೆ ದಾಖಲಿಸಿಕೊಂಡು ಜಪ್ತ ವಾಹನ ಮತ್ತು ಮ್ಹಾಲನ್ನು ಪಂಚನಾಮೆ, ಸೀಜರ್ ರಿಪೋರ್ಟ ಮತ್ತು ಪ್ರಥಮ ಮಾಹಿತಿ ವರದಿ ಜೊತೆಗೆ ಮುಂದಿನ ಕ್ರಮಕ್ಕಾಗಿ ಈ ಪ್ರಾಧಿಕಾರದ ಮುಂದೆ

ಹಾಜರುಪಡಿಸಿರುತ್ತಾರೆ. ಸದರ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಖಾತ್ರಿಪಡಿಸಿ ಈ ಪ್ರಾಧಿಕಾರದ ಆದೇಶ ದಿನಾಂಕ: 22–02–2001 ರಂದು ಸದರ ಜಪ್ತಪಡಿಸಿದ ವಾಹನ ಮತ್ತು ಸಾಗ ಸೀಸಂ ತುಂಡುಗಳನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಅಂಕೋಲಾ ಇವರ ತಾಬಾದಲ್ಲಿ ವಹಿಸಿಕೊಡಲಾಯಿತು.

2. ಸದರ ಜಪ್ತ ವಾಹನದ ಕುರಿತು ಈ ನ್ಯಾಯಾಲಯದಿಂದ ದಿನಾಂಕ: 05–03–2001 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿ, ಮಡಗಾಂವ/ಪಣಜಿಮ್ ಇವರಿಗೆ ಪತ್ರ ಬರೆದು ಬಿಳಿ ಬಣ್ಣದ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148ನೇದನ್ನು ಅರಣ್ಯ ಅಪರಾಧದಲ್ಲಿ ತೊಡಗಿಸಿಕೊಂಡಿರುವ ಬಗ್ಗೆ ಜಪ್ತ ಮಾಡಲಾಗಿದ್ದು ಈ ಬಗ್ಗೆ ಸದರ ವಾಹನದ ಮಾಲೀಕತ್ವದ ವಿಳಾಸವನ್ನು ಒದಗಿಸುವಂತೆ ತಿಳಿಸಲಾಗಿದೆ. ಈ ಕುರಿತು ಸದರ ವಾಹನದ ಮಾಲೀಕರಾದ Mr. Ashok Bajaj, Partner of Himform, Kundaim Industrial Estate, Goa ಇವರಾಗಿದ್ದು ಸದರಿಯವರು ಪವರ್ ಆಫ್ ಅಟಾರ್ನಿ ಮೂಲಕ ಸದರ ವಾಹನವನ್ನು ಶ್ರೀ. ಚಂದ್ರಕಾಂತ ಕೃಷ್ಣಾ ತಾಂಡೇಲ ಸಾ: ಗಂಗಾವಳಿ ಇವರ ಪರವಾಗಿ ನೀಡಿದ್ದು ಇರುತ್ತದೆ. ಈ ಮಧ್ಯೆ ಅರ್ಜಿದಾರ ಶ್ರೀ. ಚಂದ್ರಕಾಂತ ಕೃಷ್ಣಾ ತಾಂಡೇಲ, ಸಾ: ಗಂಗಾವಳಿ, ಕುಮಟಾ ಇವರು ದಿನಾಂಕ: 22–03–2001 ರಂದು ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಜಪ್ತ ವಾಹನವನ್ನು ಬಿಡುಗಡೆ ಮಾಡಲು ಕೋರಿಕೊಂಡ ಮೇರೆಗೆ ಈ ಪ್ರಾಧಿಕಾರದಿಂದ ದಿನಾಂಕ: 27–03–2001 ರಂದು ಅರ್ಜಿದಾರರಿಗೆ ಜಪ್ತ ವಾಹನ ತಾತ್ಕಾಲಿಕ ಬಿಡುಗಡೆಗಾಗಿ ಅರ್ಜಿಯನ್ನು ವಕೀಲರ ಮುಖಾಂತರ ಸಲ್ಲಿಸಲು ತಿಳಿಸಿದ್ದು ಇರುತ್ತದೆ.

3. ಸದರ ನೋಟೀಸುಗಳಿಗೆ ಪ್ರತಿಕ್ರಿಯಿಸುತ್ತಾ ಆರೋಪಿತ ಶ್ರೀ. ಚಂದ್ರಕಾಂತ ಕೃಷ್ಣಾ ತಾಂಡೇಲ, ಸಾ: ಗಂಗಾವಳಿ, ತಾಲೂಕು: ಕುಮಟಾ ಇವರು ದಿನಾಂಕ: 09–04–2001 ರಂದು ನ್ಯಾಯವಾದಿಗಳ ಮುಖಾಂತರ ಮನವಿಯನ್ನು ಸಲ್ಲಿಸುತ್ತಾ ತನ್ನ ಮೇಲಿನ ಅಪಾದನೆಗಳನ್ನು ತಳ್ಳಿಹಾಕಿ ತಾನು ಅರಣ್ಯ ಸಿಬ್ಬಂದಿಯವರು ಅಪಾದಿಸಿದಂತೆ ಯಾವುದೇ ರೀತಿಯ ಅರಣ್ಯ ಕಳ್ಳತನದ ಅಪರಾಧದಲ್ಲಿ ಬಾಗಿಯಾಗಿರದೇ ತನ್ನ ಕಕ್ಷಿದಾರನು ಮೀನುಗಾರಿಕೆ ವೃತ್ತಿಯಲ್ಲಿ ಇರುತ್ತಿದ್ದು ಮೀನುಗಾರಿಕೆಯ ದಂಧೆಯನ್ನು ನಡೆಸುತ್ತಿರುತ್ತಾನೆ. ಆದ್ದರಿಂದ ಜಪ್ತಪಡಿಸಲಾದ ತನ್ನ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡಲು ಕೋರಿಕೊಂಡಿರುತ್ತಾರೆ.

4. ಈ ಸಂಬಂಧವಾಗಿ ಆಪಾದಿತರು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 24 (e), 62, 71A, 80, 104D ಮತ್ತು ಕರ್ನಾಟಕ ಫಾರೆಸ್ಟ್ ರೂಲ್ 1969 Rule No:144, R/W, 165 ನೇದರಡಿ ಅಪರಾಧ ಮಾಡಿ ಕಳ್ಳಸಾಗಾಣಿಕೆಗೆ ಉಪಯೋಗಿಸಲಾದ ವಾಹನದೊಂದಿಗೆ ಅರಣ್ಯ ಉತ್ಪನ್ನ ಸಹಿತ ಜಪ್ತಪಡಿಸಿಕೊಳ್ಳಲಾಗಿದ್ದು, ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ ವಾಹನವನ್ನು ಸ್ವತ: ವಾಹನದ ಮಾಲೀಕನೇ ನಡೆಸುತ್ತಾ ಕಳ್ಳ ಸಾಗಾಣಿಕೆ ಮಾಡುತ್ತಿದ್ದು, ಅರಣ್ಯ ಕಾಯ್ದೆಯಡಿಯಲ್ಲಿ ಅಪರಾಧ ಮಾಡಿದ್ದಾರೆ. ಅರ್ಜಿದಾರರು ಅರಣ್ಯಕಾಯ್ದೆಯಡಿಯಲ್ಲಿ ಅಪರಾಧ ಎಸಗಿರುವದಕ್ಕೆ ಸಾಕ್ಷಿ ಪುರಾವೆಗಳಿದ್ದು ಅವನು ಮೇಲ್ನೋಟಕ್ಕೆ ಅಪರಾಧ ಮಾಡಿದ್ದು ಕಂಡು ಬರುತ್ತದೆ. ಹಾಗೂ ಸದರ ಅರ್ಜಿದಾರ ಸಲ್ಲಿಸಿದ ಅರ್ಜಿಯಲ್ಲಿ ನಮೂದಿಸಿದ ಯಾವುದೇ ಕಾರಣಗಳು ವಾಹನವನ್ನು ಮಧ್ಯಂತರ ತಾಬಾ ಬಿಡುಗಡೆಗೊಳಿಸಬೇಕೆಂಬುದಕ್ಕೆ ಸೂಕ್ತ ಕಾರಣಗಳಾಗಿ ಕಂಡು ಬರದೇ ಇರುವದರಿಂದ ಸದರ ವಾಹನವನ್ನು ಬಿಡುಗಡೆ ಮಾಡಬಾರದಾಗಿ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು ತಿಳಿಸಿದರು. ಅರಣ್ಯ ಅಪರಾಧದಲ್ಲಿ ಉಪಯೋಗಿಸಿದ ವಾಹನವನ್ನು ಬಿಡುಗಡೆ ಮಾಡಿದ್ದಲ್ಲಿ ಪುನ: ಸದರ ವಾಹನ ಅರಣ್ಯ ಅಪರಾಧ ಮಾಡುವದಕ್ಕೆ ಉಪಯೋಗಿಸುವದರಿಂದ ಇಂತಹ ವಾಹನಗಳನ್ನು ಬಿಡಬಾರದೆಂದು ಮಾನ್ಯ ಸರ್ವೋಚ್ಚ ನ್ಯಾಯಾಲಯ ಕ್ರಿ.ಅ.ನಂ. 668/2000 ರಲ್ಲಿಯ ಅಭಿಪ್ರಾಯವನ್ನು ಉಲ್ಲೇಖಿಸುತ್ತಾ ವಾಹನವನ್ನು ತಾತ್ಕಾಲಿಕವಾಗಿ ಬಿಡುಗಡೆಗೊಳಿಸಲು ಅರ್ಜಿದಾರರ ಮನವಿಯನ್ನು ತಿರಸ್ಕರಿಸಲಾಗಿದೆ.

5. ಅರ್ಜಿದಾರು ಮಧ್ಯಂತರ ಅರ್ಜಿಯ ಮೇಲೆ ಆದೇಶವಾದ ನಂತರ ಜಪ್ತುಪಡಿಸಿದ ವಾಹನದ ಬಗ್ಗೆ ಮುಂದಿನ ಆದೇಶಕ್ಕಾಗಿ ಪ್ರಕರಣವನ್ನು ವಿಚಾರಣೆಗಾಗಿ ಕೈಗೆತ್ತಿಕೊಳ್ಳಲಾಯಿತು. ಅರ್ಜಿದಾರರು ತಮ್ಮ ವಕೀಲರ ಮುಖಾಂತರ ವಿಚಾರಣೆ ಕಾಲಕ್ಕೆ ಹಾಜರು ಇರುತ್ತಾರೆ. ಹಾಗೂ ಎದುರುದಾರರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಣೆಗೆ ಹಾಜರು ಆಗಿರುತ್ತಾರೆ. ಫಿರ್ಯಾದುದಾರ/ಎದುರುದಾರ ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು ಪಿಡಬ್ಲ್ಯು–1 ರಿಂದ ಪಿಡಬ್ಲ್ಯು–3 ರವರನ್ನು ವಿಚಾರಿಸಿರುತ್ತಾರೆ.

ಪಿಡಬ್ಲ್ಯು–1: ಶ್ರೀ. ಟಿ.ಡಿ. ನಾಯ್ಕ (ತಿಮ್ಮಪ್ಪ ದೇವಣ್ಣ ನಾಯ್ಕ) ವನಪಾಲಕ

ಪಿಡಬ್ಲ್ಯು–2: ಶ್ರೀ. ಜೋಗಿ ರಾಮಕೃಷ್ಣ ಮಿರಾಶಿ, ಶಾಖಾ ವನಪಾಲಕ

ಪಿಡಬ್ಲ್ಯು–3: ಶ್ರೀ. ಎಸ್.ಬಿ. ಸಾವಂತ, ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಆಗಿರುತ್ತಾರೆ. ಹಾಗೂ

ನಿಶಾನೆ ಪಿ–1 ರಿಂದ ಪಿ–6ಎ ನ್ನು ಹಾಜರುಪಡಿಸಿರುತ್ತಾರೆ.

ನಿಶಾನೆ ಪಿ–1: ಪ್ರಥಮ ಮಾಹಿತಿ ವರದಿ

ನಿಶಾನೆ ಪಿ–2: ಪಂಚನಾಮೆ

ನಿಶಾನೆ ಪಿ–3: ಪಂಚನಾಮೆ

ನಿಶಾನೆ ಪಿ–4: ವಿಚಾರಣಾ ವರದಿ

ನಿಶಾನೆ ಪಿ–5: ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರ ವರದಿ

ನಿಶಾನೆ ಪಿ–6: ಆರೋಪಿ ಉದಯ ಬುದ್ದು ಹರಿಕಂತ್ರ ಇವರ ತಪ್ಪೊಪ್ಪಿಗೆ ಹೇಳಿಕೆ

ನಿಶಾನೆ ಪಿ–6ಎ: ಅರ್ಜಿದಾರ/ಆರೋಪಿ/ವಾಹನ ಮಾಲೀಕರಾದ ಚಂದ್ರಕಾಂತ ಕೃಷ್ಣಾ ತಾಂಡೇಲ ಇವರ ತಪ್ಪೊಪಿಗೆ ಹೇಳಿಕೆ ಆಗಿರುತ್ತದೆ.

ಅರ್ಜಿದಾರರ ಪರವಾಗಿ ಅರ್ಜಿದಾರನು ಸ್ವತ: ಈ ನ್ಯಾಯಾಲಯದಲ್ಲಿ ಸಾಕ್ಷಿ ಮಾಡಿರುತ್ತಾರೆ. ಅವರನ್ನು ಡಿಡಬ್ಲ್ಯು–1 ಎಂದು ವಿಚಾರಿಸಲಾಗಿದೆ. ಹಾಗೂ ಆತನ ಪರವಾಗಿ ಡಿ–1 & ಡಿ–2 ನಿಶಾನೆ ಮಾಡಲಾಗಿದೆ.

6. ಅರ್ಜಿದಾರರ ಪರ ಮಾನ್ಯ ವಕೀಲರ ಹಾಗೂ ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರ ವಾದ ವಿವಾದಗಳನ್ನು ಆಲಿಸಲಾಯಿತು. ಮಾನ್ಯ ಸಹಾಯಕ ಅಭಿಯೋಗ ನಿರ್ದೇಶಕರು **ಪಿಡಬ್ಲ್ಯು–1, 2, 3** ಇವರು ತಮ್ಮ ಸಾಕ್ಷಿಯಲ್ಲಿ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148ನೇದನ್ನು ಅಧಿಕೃತವಾಗಿ ಸಾಗ, ಸೀಸಂ ತುಂಡುಗಳ ಸಾಗಾಟ ಮಾಡುತ್ತಿದ್ದ ಬಗ್ಗೆ ನಿಶಾನೆ ಪಿ–2 ಮತ್ತು ಪಿ–3 ಅಂತಾ ಪಂಚನಾಮೆ ಮಾಡಿ ವಾಹನ ಜಪ್ತಪಡಿಸಿರುವ ಬಗ್ಗೆ ಸ್ಪಷ್ಟೀಕರಣ ನುಡಿದಿರುತ್ತಾರೆ. ಈ ಬಗ್ಗೆ ಯಾವುದೇ ವ್ಯತಿರಿಕ್ತತೆ ಇರುವದಿಲ್ಲ. ಅರ್ಜಿದಾರ/ಆಪಾದಿತ ಹಾಗೂ ಇನ್ನೊಬ್ಬ ಅಪಾದಿತ ಈ ಬಗ್ಗೆ ಹೇಳಿಕೆ ನೀಡಿದ್ದು ನಿಶಾನೆ ಪಿ–6 ಮತ್ತು ಪಿ–6ಎ ರಂತೆ ವಾಹನ ಜಪ್ತಪಡಿಸಿಕೊಂಡಿದ್ದು ಪುರಾವೆಯಾಗಿದೆ ಎಂದು ಹೇಳಿರುತ್ತಾರೆ. ಮಾನ್ಯ ಸಹಾಯಕ

ಅಭಿಯೋಗನಿರ್ದೇಶಕರು ತಮ್ಮ ವಾದ ಪುಷ್ಠೀಕರಿಸಲು ಮಾನ್ಯ ಸರ್ವೊಚ್ಚ ನ್ಯಾಯಾಲಯದ ತೀರ್ಪು 2009 (i) Crimes Page 25 ಇದನ್ನು ನೀಡಿರುತ್ತಾರೆ. ಹಾಗೂ ಆಪಾದಿತ ಉದಯ ಬುದ್ಧ ಹರಿಕಂತ್ರ ಇತನು ವಾಹನ ಗುರುತಿಸಿ ತೋರಿಸಿದ ಮೇರೆಗೆ ನಿ.ಪಿ–3 ರಂತೆ ವಾಹನ ಜಪ್ತ ಮಾಡಿದ್ದಾಗಿ ಹೇಳಿರುತ್ತಾರೆ.

ಅರ್ಜಿದಾರರ ಪರ ವಕೀಲರು ತಮ್ಮ ವಾದದಲ್ಲಿ ಅಪಾದಿತನು ಯಾವುದೇ ಅರಣ್ಯ ಅಪರಾಧದಲ್ಲಿ ತೊಡಗಿಸಿಲ್ಲವಾಗಿ ಮತ್ತು ಆತನ ವಾಹನ ಯಾವುದೇ ಗುನ್ನೆಗೆ ಬಳಸಿಲ್ಲವಾಗಿ ಹೇಳಿರುತ್ತಾರೆ ಮತ್ತು ವಾಹನವನ್ನು ಬಿಡಲು ಕೋರಿಕೊಂಡಿರುತ್ತಾರೆ.

ಮಾನ್ಯ ಸಹಾಯಕ ಅಭಿಯೋಗನಿರ್ದೇಶಕರು ಹಾಜರುಪಡಿಸಿದ ಮಾನ್ಯ ಸರ್ವೋಚ್ಛ ನ್ಯಾಯಾಲಯದ ತೀರ್ಪು ನೋಡಲಾಗಿ, ಯಾವುದೇ ವಾಹನವು ಅರಣ್ಯ ಉತ್ಪನ್ನಗಳ ಅನಧಿಕೃತ ಸಾಗಾಟ ಮಾಡಲು ಬಳಸಿದ್ದಲ್ಲಿ ಅದು Deforestation ಆಗಲು ಕಾರಣವಾಗುತ್ತದೆ ಎಂದು ಭಾವಿಸಬೇಕು ಹಾಗೂ ಇದು ನೈಸರ್ಗಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಅರಣ್ಯ ಕಾಪಾಡುವದು ಇಲಾಖೆಯ ಕರ್ತವ್ಯವಾಗಿದ್ದು ಅನಧಿಕೃತವಾಗಿ ವಾಹನವನ್ನು ಮರಗಳ ಸಾಗಾಟಕ್ಕೆ ಉಪಯೋಗಿಸಿದರೆ ಬಹಿರಂಗ ಹರಾಜು ಮಾಡಬಹುದು ಎಂದು ಆದೇಶ ಮಾಡಿದ್ದು ಇರುತ್ತದೆ.

ಹಾಜರುಪಡಿಸಿದ ಎಲ್ಲಾ ಲಿಖಿತ ದಾಖಲೆಗಳು ಹೇಳಿಕೆಗಳನ್ನು ವಾದ–ವಿವಾದಗಳನ್ನು ಆಲಿಸಿ ಪರಿಶೀಲಿಸಿದ ನಂತರ ಈ ಕೆಳಗಿನ ಪ್ರಶ್ನೆಗಳು ಉದ್ಭವಿಸುತ್ತವೆ.

ಈ) ಈ ಪ್ರಕರಣದಲ್ಲಿ ಸರ್ಕಾರಿ ಸ್ವತ್ತುಗಳಾದ ಸಾಗ/ಸೀಸಂ ತುಂಡುಗಳು ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೆ ಸಾಗಿಸುತ್ತಿದ್ದ ಬಗ್ಗೆ ಗುನ್ನೆ ದಾಖಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಉ) ಈ ಮೇಲೆ ನಮೂದಿಸಿದ ಸಾಗ/ಸೀಸಂ ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ಉಪಯೋಗ ಮಾಡಲಾಗಿದೆಯೇ? ಹಾಗೂ ಅದನ್ನು ಎದುರುದಾರರು ಸಾಬೀತುಪಡಿಸುತ್ತಾರೆಯೇ?

ಊ) ಈ ಗುನ್ನೆಯನ್ನು ವಾಹನದ ಮಾಲೀಕ/ಅಪಾದಿತನು/ಅರ್ಜಿದಾರನು ವಾಹನದ ಜವಾಬ್ದಾರಿ ಹೊಂದಿದ ವ್ಯಕ್ತಿಯಾಗಿ ಗೊತ್ತಿದ್ದು ಮಾಡಿದ್ದಾರೆಯೇ? ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆಯೇ?

ಋ) ಈ ವಾಹನವನ್ನು ಅರಣ್ಯ ಕಾಯಿದೆ 71ಎ ನಿಯಮದಡಿ ಮುಟ್ಟುಗೋಲು ಹಾಕಿಕೊಳ್ಳಬಹುದೇ?

**ಮೇಲ್ಕಂಡ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸುತ್ತೇನೆ.**

ಅಂಶ ನಂ. (ಅ) –– ಹೌದು

ಅಂಶ ನಂ. (ಆ) –– ಹೌದು

ಅಂಶ ನಂ. (ಇ) –– ಹೌದು

ಅಂಶ ನಂ. (ಈ) –– ಹೌದು

ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ವಿವರಿಸುತ್ತೇನೆ.

**ವಿಚಾರಣೆ ಕಾಲಕ್ಕೆ ನೀಡಲಾದ ಹೇಳಿಕೆಗಳು:**

**ಅಂಶ ನಂ (ಅ):**

ಎಲ್ಲಾ ದಾಖಲೆ ಹೇಳಿಕೆಗಳನ್ವಯ ದಿನಾಂಕ: 20–02–2001 ರಂದು ರಾತ್ರಿ ಸುಮಾರು 2.00 ಘಂಟೆ ಸಮಯಕ್ಕೆ ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಸಿಬ್ಬಂದಿ ಜೊತೆಗೂಡಿ ಮಾಸ್ತಿಕಟ್ಟಾದಿಂದ ಸುಂಕಸಾಳ ಮಾರ್ಗವಾಗಿ ಸರ್ಕಾರಿ ಟಾಟಾಮೊಬೈಲ್ ವಾಹನ ಸಂಖ್ಯೆ: KA-30/G-31 ನೇದರಲ್ಲಿ ಗಸ್ತು ತಿರುಗುವಾಗ ಬಿಳಿ ಬಣ್ಣದ ಟಾಟಾಮೊಬೈಲ್‌ನಲ್ಲಿ ಹಿಂಬದಿಗೆ 2–3 ಜನ ಸಂಶಯಾಸ್ಪದ ವ್ಯಕ್ತಿಗಳು ಕಂಡು ಬಂದಿದ್ದು ಅವರನ್ನು ಹಿಂಬಾಲಿಸಿ ಅಟಕಾಯಿಸುವಷ್ಟರಲ್ಲಿ ಸದರ ವಾಹನದಿಂದ 2 ತುಂಡುಗಳನ್ನು ಬೀಸಾಡಿದ್ದು ನಂತರ ಸದರ ವಾಹನವನ್ನು ಪುನ: ಹಿಂಬಾಲಿಸುವಷ್ಟರಲ್ಲಿ ಉಳಿದ ಸಾಗ/ಸೀಸಂ ತುಂಡುಗಳು ಖಾಲಿ ಮಾಡಿ ಹೋಗುವಷ್ಟರಲ್ಲಿ ಒಬ್ಬ ಆರೋಪಿ ಉದಯ ಬೀರಪ್ಪ ಹರಿಕಾಂತ, ಸಾ: ಹೊಸಕಂಬಿ ಇವರನ್ನು ವಶಕ್ಕೆ ತೆಗೆದುಕೊಳ್ಳುವಷ್ಟರಲ್ಲಿ ವಾಹನ ಪರಾರಿಯಾಗಿದ್ದು ಈ ಬಗ್ಗೆ ದಸ್ತಗಿರಿ ಮಾಡಲಾದ ಆರೋಪಿತನಿಂದ ಹೆಚ್ಚಿನ ತನಿಖೆಯನ್ನು ಮುಂದುವರಿಸಿ, ಗುನ್ನೆಗೆ ಬಳಸಿದ ಬಿಳಿ ಬಣ್ಣದ ಟಾಟಾಮೊಬೈಲ್ ಸಂಖ್ಯೆ: GA-01/W-1148 ತಿಳಿದು ಬಂದಿದ್ದು ನಂತರ ಶೋಧ ಕಾರ್ಯ ನಡೆಸಿ ಸದರ ವಾಹನವನ್ನು ಕಾರವಾರ ಎಸ್.ಪಿ. ಕಚೇರಿಯ ಹತ್ತಿರ ವಶಕ್ಕೆ ತೆಗೆದುಕೊಂಡು ಈ ವಾಹನದ ಮಾಲೀಕ/ಚಾಲಕರಾದ ಶ್ರೀ. ಚಂದ್ರಕಾಂತ ಕೃಷ್ಣಾ ತಾಂಡೇಲ, ಸಾ: ಗಂಗಾವಳಿ, ಕುಮಟಾ ಇವರನ್ನು ವಶಕ್ಕೆ ತೆಗೆದುಕೊಂಡು ಹಾಗೂ ಸದರ ವಾಹನದಲ್ಲಿ ಅನಧಿಕೃತವಾಗಿ ಸಾಗಿಸಿದ ಸಾಗ/ಸೀಸಂ ತುಂಡುಗಳ ಪಾಸ್ ಯಾ ಫರ್ಮಿಟ್ ಇದ್ದ ಬಗ್ಗೆ ದಾಖಲಾತಿ ಪರಿಶೀಲಿಸಲಾಗಿ ಅದರಲ್ಲಿ ಯಾವುದೇ ಅಧಿಕೃತ ದಾಖಲೆ ಪಾಸ್ ಯಾ ಫರ್ಮಿಟ್ ಇದ್ದದ್ದು ಕಂಡು ಬಂದಿರುವದಿಲ್ಲ. ಈ ಕುರಿತು ಪಾಸ್ ಪರ್ಮಿಟ ಇಲ್ಲದೇ ಸಾಗ/ಸೀಸಂ ತುಂಡುಗಳನ್ನು ಸದರ ವಾಹನದ ಮೂಲಕ ಅನಧಿಕೃತವಾಗಿ ಕಳ್ಳತನದಿಂದ ಸಾಗಿಸಲು ಪ್ರಯತ್ನಿಸಿದ್ದು ಕಂಡು ಬಂದಿರುತ್ತದೆ. ಯಾವುದೇ ಅರಣ್ಯ ಉತ್ಪನ್ನಗಳನ್ನು ಅಧಿಕೃತ ಪಾಸ್ ಯಾ ಫರ್ಮಿಟ್ ಅಥವಾ ಅದಕ್ಕೆ ಸಂಬಂಧಿಸಿದ ಅಧಿಕೃತ ದಾಖಲೆಗಳಿಲ್ಲದೇ ಸಾಗಿಸುವದು ಕಾನೂನು ರೀತ್ಯಾ ಅಪರಾಧವಾಗಿರುತ್ತದೆ. ಈ ಬಗ್ಗೆ ಪ್ರಥಮ ಮಾಹಿತಿ ವರದಿ (ನಿ.ಪಿ–1), ಪಂಚನಾಮೆ (ನಿ.ಪಿ–2 & 3), ಸಾಕ್ಷಿದಾರರ (ಪಿಡಬ್ಲ್ಯು–1 ರಿಂದ 3ರ ವರೆಗೆ) ಹೇಳಿಕೆ ಅಪಾಧಿತರು ನೀಡಿರುವ ತಪ್ಪೊಪ್ಪಿಗೆ ಹೇಳಿಕೆ (ನಿ.ಪಿ–6 & 6ಎ) ಇವೆಲ್ಲವುಗಳನ್ನು ಗಮನಿಸಿ ಪರಿಶೀಲಿಸಲಾಗಿ, ಸದರ ಪ್ರಕರಣದಲ್ಲಿ ಸರ್ಕಾರಿ ಸ್ವತ್ತಾದ ಸಾಗ ನಗಗಳು 15=0.941 ಘ.ಮೀ., ಸೀಸಂ ನಗಗಳು 2=0.178 ಘ.ಮೀ. ಅಧಿಕೃತ ಪಾಸ್ ಯಾ ಫರ್ಮಿಟ್ ಇಲ್ಲದೇ ಸಾಗಿಸುತ್ತಿದ್ದ ಬಗ್ಗೆ ದೃಢಪಟ್ಟಿದೆ. ಹಾಗೂ ಅಪಾದಿತ/ಅರ್ಜಿದಾರರ ಮೇಲೆ ಗುನ್ನೆ ದಾಖಲಾದ ಬಗ್ಗೆ ಸಾಬೀತಾಗಿರುತ್ತದೆ.

**ಅಂಶ ನಂ. (ಆ):**

ಬಿಳಿ ಬಣ್ಣದ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ಇದರಲ್ಲಿ ದಿನಾಂಕ: 20–02–2001 ರಂದು ರಾತ್ರಿ 2.00 ಘಂಟೆ ಸುಮಾರಿಗೆ ಮಾಸ್ತಿಕಟ್ಟಾ ಸುಂಕಸಾಳ ರಸ್ತೆ ಮಾರ್ಗದಲ್ಲಿ ಅನಧಿಕೃತ ಸಾಗ ನಗಗಳು 15=0.941 ಘ.ಮೀ., ಸೀಸಂ ನಗಗಳು 2=0.178 ಘ.ಮೀ. ತುಂಡುಗಳು ಸಾಗಿಸುವಾಗ ವಾಹನ ಬೆನ್ನಟ್ಟಿ ಹಿಡಿದದ್ದು ಈ ಬಗ್ಗೆ ಗುನ್ನೆ ಸಂಖ್ಯೆ: 2/2000–01 ದಿನಾಂಕ: 20–02–2001 ರಲ್ಲಿ ನಮೂದಿಸಿದ್ದು ಇದೆ. ಹಾಗೂ

ತತ್ಸಂಬಂಧ ಪಂಚನಾಮೆ ಜರುಗಿಸಿ ಅದರಲ್ಲಿ ಕೂಡಾ ಟಾಟಾಮೊಬೈಲ್ ವಾಹನವನ್ನು ಗುನ್ನೆಯಲ್ಲಿ ಬಳಸಿದ ಬಗ್ಗೆ ದಾಖಲಾಗಿದೆ. ಅದನ್ನು **(ಪಿ–2 ಮತ್ತು ಪಿ–3)**. ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಸಲ್ಲಿಸಿದ ವರದಿಯಲ್ಲಿ **(ಪಿ–5)** ಕೂಡ ಸದರ ವಾಹನವು ಮೇಲ್ಕಾಣಿಸಿದ ಅರಣ್ಯ ಅಪರಾಧದಲ್ಲಿ ಬಳಸಿದ ಬಗ್ಗೆ ವರದಿಸಲಾಗಿದೆ. ಸದರ ವಾಹನದ ಮಾಲೀಕ ಮತ್ತು ಚಾಲಕ ಹಾಗೂ ಇನ್ನೊಬ್ಬ ಆರೋಪಿ ಆಪಾದಿತರು ವಲಯ ಅರಣ್ಯಾಧಿಕಾರಿ, ಮಾಸ್ತಿಕಟಾ ರವರ ಸಮಕ್ಷಮ ಬರೆದುಕೊಟ್ಟ ತಪ್ಪೊಪ್ಪಿಗೆ ಪತ್ರ **(ಪಿ–6 ಮತ್ತು ಪಿ–6ಎ)** ದಲ್ಲಿ ತಾನು ಸದರ ವಾಹನದಲ್ಲಿ ಅನಧಿಕೃತವಾಗಿ ಸಾಗ/ಸೀಸಂ ತುಂಡುಗಳನ್ನು ಹೇರಿಕೊಂಡು ಸಾಗಾಟ ಮಾಡುವಾಗ ಅರಣ್ಯ ಸಿಬ್ಬಂದಿಯವರು ಜಪ್ತ ಮಾಡಿರುವದಾಗಿ ಒಪ್ಪಿಕೊಂಡಿರುತ್ತಾರೆ. ಇದೂ ಅಲ್ಲದೇ ಸರ್ಕಾರದ ಪರ ಸಾಕ್ಷಿ ವಿಚಾರಣೆಯಲ್ಲಿ **ಪಿಡಬ್ಲ್ಯು–1, 2, 3** ಇವರು ನೀಡಿದ ಹೇಳಿಕೆಯಲ್ಲೂ ಕೂಡ ಸದರ ಟಾಟಾಮೊಬೈಲ್ ವಾಹನ ಸಾಗ/ಸೀಸಂ ತುಂಡುಗಳ ಕಳ್ಳಸಾಗಾಣಿಕೆಯ ಅರಣ್ಯ ಅಪರಾಧದಲ್ಲಿ ಬಳಸಿಕೊಂಡಿದ್ದು ಖಚಿತಪಡಿಸುತ್ತದೆ.

ವಾಹನದ ಮಾಲೀಕ/ಚಾಲಕನಾದ ಚಂದ್ರಕಾಂತ ಕೃಷ್ಣಾ ತಾಂಡೇಲ ಇವರು ದಿನಾಂಕ: 09–04–2001 ರಂದು ತಾನು ಸಲ್ಲಿಸಿದ ಮನವಿಯಲ್ಲಿ ಸದರ ಗುನ್ನೆಯಲ್ಲಿ ತನ್ನ ಟಾಟಾಮೊಬೈಲ್ ವಾಹನ ಬಳಕೆ ಮಾಡಿಲ್ಲ. ಅರಣ್ಯ ಇಲಾಖೆ ಸಿಬ್ಬಂದಿಗಳು ಸುಳ್ಳು ಮೊಕದ್ದಮೆ ದಾಖಲಿಸಿರುತ್ತಾರೆ ಎಂದು ಹೇಳಿರುತ್ತಾರೆ. ಆಪಾದಿತ ನಿಶಾನೆ **ಡಿ–1**ಮತ್ತು **ಡಿ–2** ದಾಖಲಾತಿಗಳನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದನ್ನು ಪರಿಶೀಲಿಸಲಾಗಿ, ಅವುಗಳಲ್ಲಿ ಆರೋಪಿತನ ಹೆಸರು ಇರುವದಿಲ್ಲ. ಕಾರಣ, ದಿನಾಂಕ: 20–02–2001 ರಂದು ಆಪಾದಿತ ಅರ್ಜಿದಾರನು ಮಾನ್ಯ ಜಿಲ್ಲಾ ಸೆಷನ್ ನ್ಯಾಯಲಯ ಕಾರವಾರಕ್ಕೆ ಬಂದಿದ್ದು ಸಾಬೀತುಪಡಿಸುವಲ್ಲಿ ವಿಫಲರಾಗಿರುತ್ತಾರೆ. ಈತನ ಹೆಂಡತಿ ಮತ್ತು ತಾಯಿ ಮಾನ್ಯ ಜಿಲ್ಲಾ ಸೆಷನ್ ನ್ಯಾಯಾಲಯ, ಕಾರವಾರಕ್ಕೆ ಬಂದ ಬಗ್ಗೆ ಸಹ ಪುರಾವೆ ಆಗುವದಿಲ್ಲ. ಆಪಾದಿತ ಅರ್ಜಿದಾರ ಸ್ವತ: ಚಾಲಕ ಮತ್ತು ವಾಹನದ ಮಾಲೀಕರಾಗಿರುವದು ದೃಢಪಟ್ಟಿರುವದರಿಂದ ಹಾಗೂ ಈ ಗುನ್ನೆಯಲ್ಲಿ ಶಾಮೀಲಾಗಿರುವದು ದೃಢಪಟ್ಟಿರುತ್ತದೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿ ಪರಿಶೀಲಿಸಲಾಗಿ, ಸದರ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ಇದನ್ನು ಪ್ರಸ್ತುತ ಗುನ್ನೆ ಸಂಖ್ಯೆ: 2/2000–01 ದಿನಾಂಕ: 20–02–2001 ನೇದರಂತೆ ದಾಖಲಿಸಲಾದ ಪ್ರಕರಣದ ಸಾಗ/ಸೀಸಂ ತುಂಡುಗಳು ಕಳ್ಳ ಸಾಗಾಣಿಕೆ ಮಾಡುವಲ್ಲಿ ಉಪಯೋಗಿಸಿದ್ದು ಸಾಬೀತಾಗಿದೆ.

**ಅಂಶ ನಂ. (ಇ):**

ದಿನಾಂಕ: 20–02–2001 ರಂದು ವಲಯ ಅರಣ್ಯಾಧಿಕಾರಿ, ಮಾಸ್ತಿಕಟ್ಟಾ ಇವರು ಈ ನ್ಯಾಯಾಲಯದ ಎದುರು ಹಾಜರುಪಡಿಸಿದ ವರದಿ **(ಪಿ–5)** ಹಾಗೂ ಅದರೊಂದಿಗೆ ಸಲ್ಲಿಸಿದ ಪ್ರಥಮ ಮಾಹಿತಿ ವರದಿ ಸಂಖ್ಯೆ: 2/2000–01, ದಿನಾಂಕ: 20–02–2001 ಪಂಚನಾಮೆ **(ಪಿ–2 ಮತ್ತು ಪಿ–3)** ಅಲ್ಲದೇ ಆರೋಪಿಗಳು ನೀಡಿದ ತಪ್ಪೊಪ್ಪಿಗೆ ಹೇಳಿಕೆ **(ಪಿ–6 ಮತ್ತು ಪಿ–6ಎ)** ಇವುಗಳನ್ನೆಲ್ಲ ಪರಿಶೀಲಿಸಲಾಗಿದೆ. ಆರೋಪಿತ ಅರ್ಜಿದಾರನು ಸ್ವತ: ತನ್ನ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ನೇದರಲ್ಲಿ ಅನಧಿಕೃತವಾಗಿ ಯಾವುದೇ ಪಾಸ್ ಯಾ ಫರ್ಮಿಟ್ ಅಥವಾ ತತ್ಸಂಬಂಧ ಯಾವುದೇ ಅಧಿಕೃತ ದಾಖಲೆ ಇಲ್ಲದೇ ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ ಎಂಬುದು ಖಚಿತವಾಗುತ್ತದೆ. ಈ ರೀತಿ ಅರಣ್ಯಗುನ್ನೆಯಲ್ಲಿ ಸಿಕ್ಕಿಬಿದ್ದಾಗ ನೀಡಿರುವ ಲಿಖಿತ ತಪ್ಪೊಪ್ಪಿಗೆ ಪತ್ರದಲ್ಲಿ ತಾನು ಸಾಗ/ಸೀಸಂ ತುಂಡುಗಳು ಕಳ್ಳ ಸಾಗಾಣಿಕೆ ಮಾಡಿದ್ದು ನಿಜವಿರುವದಾಗಿ ಒಪ್ಪಿಕೊಂಡಿದ್ದಾನೆ. ಆದಾಗ್ಯೂ ಸಹಿತ ಅಪಾದಿತ ಅರ್ಜಿದಾರನು ದಿನಾಂಕ: 09–04–2001 ರಂದು ತಾನು ಸ್ವತ: ಹಾಗೂ ತನ್ನ ನ್ಯಾಯವಾದಿಗಳ ಮುಖಾಂತರ ಮತ್ತೊಂದು ಮನವಿಯನ್ನು ಸಲ್ಲಿಸಿ ತಾನು ಯಾವುದೇ ಅರಣ್ಯ ಅಪರಾಧ ಮಾಡಿದ್ದು ಇರುವದಿಲ್ಲ. ತನ್ನ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ವಾಹನವು ಯಾವುದೇ ಅರಣ್ಯ ಅಪರಾಧ ಮಾಡುವ ಸಲುವಾಗಿ ಬಳಸಿದ್ದು ಇರುವುದಿಲ್ಲವಾಗಿ ತಿಳಿಸಿದ್ದು, ಆದರೆ, ಸದರ ಅರ್ಜಿದಾರನಾಗಲಿ ಅಥವಾ ಅವರ ಪರ ವಕಾಲತ್‌ವಹಿಸಿದ ನ್ಯಾಯವಾದಿಗಳಾಗಲಿ ತಮ್ಮ ಹೇಳಿಕೆಯನ್ನು ಸಮರ್ಥಿಸಬಹುದಾದಂತಹ ಯಾವುದೇ ದಾಖಲೆ/ಸಾಕ್ಷಿ ಪುರಾವೆಗಳನ್ನು ಒದಗಿಸುವಲ್ಲಿ ವಿಫಲರಾಗಿದ್ದಾರೆ. ಆದ್ದರಿಂದ ಫಿರ್ಯಾದುದಾರರು ಒದಗಿಸಿದ ದಾಖಲೆಗಳು ಅಂದರೆ ಪ್ರಥಮ ಮಾಹಿತಿ ವರದಿ, ಪಂಚನಾಮೆ ಹಾಗೂ ಸಾಕ್ಷಿ ಹೇಳಿಕೆಗಳನ್ನು ಅಧಿಕೃತವೆಂದು ಪರಿಗಣಿಸಲಾಗಿದೆ.

ಪ್ರಸ್ತುತ ಪ್ರಕರಣದಲ್ಲಿ ವಾಹನ ಮಾಲೀಕರೇ ಸ್ವತ: ತಮ್ಮ ಸ್ವಂತ ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ನೇದರಲ್ಲಿ ಅನಧಿಕೃತವಾಗಿ ಪಾಸ್ ಯಾ ಫರ್ಮಿಟ್ ಇಲ್ಲದೇ ಸಾಗ/ಸೀಸಂ ತುಂಡುಗಳನ್ನು ಕಳ್ಳಸಾಗಾಣಿಕೆ ಮಾಡುವಾಗ ಸಿಕ್ಕಿಬಿದ್ದಿರುತ್ತಾರೆ. ಇಲ್ಲಿ ಅಪರಾಧಿಯೇ ಸ್ವತ: ಚಾಲಕ ಹಾಗೂ ವಾಹನದ ಮಾಲೀಕ ಮತ್ತು ಅರ್ಜಿದಾರ ಆಗಿದ್ದಾರೆ ಎನ್ನುವದು ದೃಢಪಟ್ಟಿರುವದರಿಂದ ಈ ಗುನ್ನೆಯನ್ನು ವಾಹನದ ಮಾಲೀಕ ಅಥವಾ ಅವರ ಏಜೆಂಟ್ ಅಥವಾ ಅದರ ಜವಾಬ್ದಾರಿ ಹೊಂದಿದ ವ್ಯಕ್ತಿಗಳಿಗೆ ಗೊತ್ತಿದ್ದು ಮಾಡಲಾಗಿದೆ. ಹಾಗೂ ಅವರು ಈ ಗುನ್ನೆಯಲ್ಲಿ ಶಾಮೀಲಾಗಿದ್ದಾರೆ ಎಂದು ದೃಢಪಟ್ಟಿದೆ.

**ಅಂಶ ನಂ. (ಈ):**

ಈ ಪ್ರಕರಣದಲ್ಲಿ ಸರ್ಕಾರದ ಪರ ಹಾಗೂ ಅರ್ಜಿದಾರರ ಪರ ದಾಖಲೆಗಳನ್ನು, ಸಾಕ್ಷಿಗಳ ಹೇಳಿಕೆಗಳನ್ನು ಪರಿಶೀಲಿಸಲಾಗಿ, ಟಾಟಾಮೊಬೈಲ್ ವಾಹನ ಸಂಖ್ಯೆ: GA-01/W-1148 ಇದು ದಿನಾಂಕ: 20–02–2001 ರಂದು ಪ್ರಥಮ ಮಾಹಿತಿ ಸಂಖ್ಯೆ: 2/2000–01, ದಿನಾಂಕ: 20–02–2001ರನ್ವಯ ದಾಖಲಾದ ಗುನ್ನೆಯಲ್ಲಿ ಅನಧಿಕೃತವಾಗಿ ಸಾಗ ನಗಗಳು 15=0.941 ಘ.ಮೀ., ಸೀಸಂ ನಗಗಳು 2=0.178 ಘ.ಮೀ. ಕಳ್ಳ ಸಾಗಾಣಿಕೆ ಮಾಡುವಲ್ಲಿ ತೊಡಗಿಸಿಕೊಂಡಿದ್ದು ದೃಢಪಟ್ಟಿರುವದರಿಂದ ಕರ್ನಾಟಕ ಅರಣ್ಯ ಕಾಯಿದೆ 71(ಎ)ರಡಿಯಲ್ಲಿ ಮುಟ್ಟುಗೋಲು ಹಾಕಿಕೊಳ್ಳಬೇಕೆನ್ನುವ ಅಂಶವು ಮನದಟ್ಟಾಗಿದೆ.

ಆದ್ದರಿಂದ ಈ ಕೆಳಗಿನಂತೆ ಆದೇಶ:

**:ಆದೇಶ:**

ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಪರಿಗಣಿಸಿ ಟಿ.ಹೀರಾಲಾಲ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಕಾರವಾರ ವಿಭಾಗ, ಕಾರವಾರ ಆದ ನಾನು ಈ ಮೂಲಕ ಆದೇಶಿಸುವದೇನೆಂದರೆ ಈ ಗುನ್ನೆ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯಿದೆ 1963ರ ಅನುಚ್ಛೇದ 71 (ಎ) ಈ ತಾರೀಖಿನ ವರೆಗೆ ಆದ ತಿದ್ದುಪಡಿ ಪ್ರಕಾರ ಟಾಟಾ ಮೊಬೈಲ್ ವಾಹನ ಸಂಖ್ಯೆ: GA-01/W-1148 ಮತ್ತು ಅದರಲ್ಲಿದ್ದ ಸಾಗ ತುಂಡುಗಳು 15=0.941 ಘ.ಮೀ. ಮತ್ತು ಸೀಸಂ ತುಂಡುಗಳು 2=0.178 ಘ.ಮೀ.ನ್ನು ಈ ಮೂಲಕ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ.

ವಾಹನದ ವಿವರ:

5) ನೋಂದಣಿ ಸಂಖ್ಯೆ : GA-01/W-1148

6) ಚೆಸ್ ನಂಬರ : J 37 4005 J V 0912130

7) ವಾಹನದ ಮಾದರಿ : ಟಾಟಾಮೊಬೈಲ್ (ನಾಲ್ಕು ಗಾಲಿ)

ಈ ಆದೇಶವನ್ನು ಹೊರಡಿಸಿದ 30 ದಿನಗಳ ಅವಧಿಯಲ್ಲಿ ಮೇಲ್ಮನವಿಯನ್ನು ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ. ಈ ಆದೇಶವನ್ನು ಈ ಹೊತ್ತಿನ ದಿನಾಂಕ: 06 –12–2013 ರಂದು ಈ ನ್ಯಾಯಲಯದಲ್ಲಿ ಮೊಹರು ಹಾಕಿ ನನ್ನ ಸಹಿಯೊಂದಿಗೆ ಬಿಡುಗಡೆ ಮಾಡಿರುತ್ತೇನೆ.

**ಟಿ.ಹೀರಾಲಾಲ್, ಭಾ.ಅ.ಸೇ.**

ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಕಾರವಾರ ವಿಭಾಗ, ಕಾರವಾರ.

**PR.78**

**SC.5**

## ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ

**ವಿಷಯ:** ಶ್ರೀ ಬಿ. ಆರ್. ಬಸಪ್ಪಶೆಟ್ಟಿ, ಭೂಮಾಪಕರು, ತಹಶೀಲ್ದಾರ್ ಕಛೇರಿ, ಹಾಸನ (ಹಿಂದೆ ತಹಶೀಲ್ದಾರ್, ಬೇಲೂರು) ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದ ಬಗ್ಗೆ - ಅಂತಿಮ ಆದೇಶ ಹೊರಡಿಸುವ ಕುರಿತು.

ಉಲ್ಲೇಖ:
1. ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ:ಎಲ್.ಓ.ಕೆ/ಐಎನ್ ವಿ(ಜಿ)ಎಂ-7/ ಸಿಆರ್-5/2005,ಹೆಚ್.ಎಸ್.ಎನ್, ದಿನಾಂಕ 26-05-2005 ಮತ್ತು ಅಂತಿಮ ತನಿಖಾ ವರದಿ 02-01-2006.
2. ಈ ಕಛೇರಿಯ ಆದೇಶ ಸಂ:ಸಿಬ್ಬಂದಿ.ಶಿಸ್ತು.ಟ್ರ್ಯಾಪ್.3/2005-2006, ದಿನಾಂಕ 13-6-2005 (ಅಮಾನತ್ತು), 15-09-2006 (ಅಮಾನತ್ತು ತೆರವು), ಮತ್ತು 09-08-2006 ( ಅಭಿಯೋಜನಾ ಮಂಜೂರಾತಿ).
3. ಘನ ಹಾಸನ ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯವು ವಿಶೇಷ ಪ್ರಕರಣ ಸಂ: 64/2006, ಆದೇಶ ದಿನಾಂಕ: 19-06-2012.
4. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ:ಲೋಕ್/ಐಎನ್ ವಿ(ಜಿ)ಎಂ-7/ ಸಿಆರ್-5/2005, ಹಾಸನ, ದಿನಾಂಕ 09-05-2013

**ಪ್ರಸ್ತಾವನೆ:**

ಶ್ರೀ ಬಿ. ಆರ್. ಬಸಪ್ಪಶೆಟ್ಟಿ, ಭೂಮಾಪಕರು, ತಹಶೀಲ್ದಾರ್ ಕಛೇರಿ, ಹಾಸನ ಇವರು ಈ ಹಿಂದೆ ಬೇಲೂರು ತಹಶೀಲ್ದಾರ್ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಫಿರ್ಯಾದಿದಾರರಾದ ಜಿ.ಜೆ ಕೊಹಿಲೋ, ಬಿನ್ ಎಫ್.ಎ.ಬಿ ಕೊಹಿಲೋ, ಕಾಫಿ ಪ್ಲಾಂಟರ್, ಎವರ್ ಗ್ರೀನ್ ಎಸ್ಟೇಟ್, ವಾಟೆಹಳ್ಳಿ ಅಂಚೆ, ಬೇಲೂರು ತಾಲ್ಲೂಕು, ಹಾಸನ ಜಿಲ್ಲೆ, ಇವರಿಗೆ ಸೇರಿದ ಅರೇಹಳ್ಳಿ ಹೋಬಳಿ, ವಾಟೇಹಳ್ಳಿ ಗ್ರಾಮದ ಸ.ನಂ. 33/1ರಲ್ಲಿ 6 ಎಕರೆ ಜಮೀನು ಮಂಜೂರಾಗಿದ್ದು, ಸದರಿ ಜಮೀನಿನ ದುರಸ್ತಿ ಕಾರ್ಯ ಕೈಗೊಂಡು ಹೊಸದಾಗಿ ಸರ್ವೆ ನಂಬರನ್ನು ನೀಡುವ ಸಲುವಾಗಿ ಬೇಲೂರು ಶ್ರೀ ಬಿ. ಆರ್. ಬಸಪ್ಪಶೆಟ್ಟಿ, ಭೂಮಾಪಕರು, ರೂ. 15,000/-ಗಳ ಲಂಚದ ಹಣಕ್ಕೆ ಒತ್ತಾಯಿಸಿದ್ದು, ದಿನಾಂಕ 20-04-2005 ರಂದು ಬೇಲೂರಿನ ಸುಧಾ ಲಾಡ್ಜನ ರೂಮ್ ನಂ. 2ರಲ್ಲಿ ರೂ. 15,000/-ಗಳ ಲಂಚನ ಹಣವನ್ನು ಸ್ವೀಕರಿಸಿದ ಸಮಯದಲ್ಲಿ ಲೋಕಾಯುಕ್ತರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಉಲ್ಲೇಖ (1)ರ ದಿನಾಂಕ 26-05-2005ರ ಪತ್ರದಲ್ಲಿ ತಿಳಿಸಿರುತ್ತಾರೆ.

ಈ ಕಛೇರಿಯ ಉಲ್ಲೇಖ (2)ರ ಆದೇಶ ದಿನಾಂಕ 13-6-2005 ರಲ್ಲಿ ಆರೋಪಿತರನ್ನು ಅಮಾನತ್ತಿನಲ್ಲಿಟ್ಟು, ಹುದ್ದೆಯ ಮೇಲಿನ ಹಕ್ಕನ್ನು ತಹಶೀಲ್ದಾರ್, ಹಾಸನ ಕಛೇರಿಗೆ ಸ್ಥಳಾಂತರಿಸಲಾಗಿದ್ದು, ತದನಂತರ ಈ ಕಛೇರಿಯ ಆದೇಶ ದಿನಾಂಕ: 13-09-2006 ರಲ್ಲಿ ಆರೋಪಿತ ನೌಕರರ ವಿರುದ್ಧ ಟ್ರ್ಯಾಪ್ ಪ್ರಕರಣದದ ಇತ್ಯರ್ಥವನ್ನು ಕಾಯ್ದಿರಿಸಿ, ಅಮಾನತ್ತಿನಿಂದ ತೆರವುಗೊಳಿಸಿ, ತಹಶೀಲ್ದಾರ್, ಹಾಸನ ಕಛೇರಿಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಭೂಮಾಪಕರ ಹುದ್ದೆಗೆ ಪುನರ್ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಈ ಕಛೇರಿಯ ಆದೇಶ ದಿನಾಂಕ 09-08-2006 ರನ್ವಯ ಅಭಿಯೋಜನಾ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣದ ಬಗ್ಗೆ ಉಲ್ಲೇಖ (3)ರ ಘನ ಹಾಸನ ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂ: 64/2006ರ ಆದೇಶ ದಿನಾಂಕ 19-06-2012ರಲ್ಲಿ ಶ್ರೀ ಬಿ. ಆರ್. ಬಸಪ್ಪಶೆಟ್ಟಿ, ಭೂಮಾಪಕರು, ತಹಶೀಲ್ದಾರ್ ಕಛೇರಿ, ಬೇಲೂರು ಇವರ ವಿರುದ್ಧ ಆರೋಪವು ಸಾಬೀತಾಗಿರುವುದಾಗಿ ತೀರ್ಪು ನೀಡಿರುತ್ತದೆ. ಸದರಿ ತೀರ್ಪಿನಲ್ಲಿ ಶ್ರೀ ಬಿ. ಆರ್. ಬಸಪ್ಪಶೆಟ್ಟಿ ಪ್ರಥಮ ದರ್ಜೆ ಭೂಮಾಪಕರು ಇವರಿಗೆ ಲಂಚ ನಿರೋಧಕ ಕಾಯ್ದೆ 1988ರ ಕಲಂ 7ರ ಅಡಿಯಲ್ಲಿ 1 ವರ್ಷ ಕಠಿಣ ಸೆರೆಮನೆವಾಸ ಹಾಗೂ ರೂ. 5,000/-ಗಳ ದಂಡ, ದಂಡ ಕಟ್ಟಲು ತಪ್ಪಿದ್ದಲ್ಲಿ 3 ತಿಂಗಳ ಸೆರೆಮನೆವಾಸ ಹಾಗೂ ಕಲಂ 13(1) (ಡಿ) ಸಹವಚನ 13(2)ರಡಿಯಲ್ಲಿ 3 ವರ್ಷ ಕಠಿಣ ಸೆರೆಮನೆವಾಸ ಹಾಗೂ ರೂ.15,000/-ಗಳ ದಂಡ, ದಂಡ ಕಟ್ಟಲು ತಪ್ಪಿದ್ದಲ್ಲಿ 6 ತಿಂಗಳ ಸಾದಾ ಸೆರೆಮನೆವಾಸ ಅನುಭವಿಸುವಂತೆ ತೀರ್ಪು ನೀಡಿ ಆದೇಶಿಸಿರುವ ಕಾರಣ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಉಲ್ಲೇಖ(4)ರ ಪತ್ರದಲ್ಲಿ ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ರಿವಿಷನ್ ಸಂ:770/2001 (ಎಸ್.ಎಲ್.ಪಿ.ಅಪರಾಧ ಸಂಖ್ಯೆ 2202/2001 ದಿನಾಂಕ 2-8-2001) ತೀರ್ಪಿನಲ್ಲಿ ಹೇಳಿರುವಂತೆ ಘನ ಜಿಲ್ಲಾ ನ್ಯಾಯಾಲಯವು ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಹಾಗೂ ಸರ್ಕಾರದ ಸುತ್ತೋಲೆ ಸಂ:ಸಿಆಸುಇ 9 ಸೇಇವಿ 95, ದಿನಾಂಕ 26-06-1996ರಲ್ಲಿ ಘನ ನ್ಯಾಯಾಲಯದಲ್ಲಿ ಆರೋಪಣೆಗಳು ಸಾಬೀತಾಗಿ ಆಪಾದಿತ ನೌಕರನಿಗೆ ಶಿಕ್ಷೆಯಾದಲ್ಲಿ ಅಂತಹ ಅಧಿಕಾರಿ/ ನೌಕರರನ್ನು ಸೇವೆಯಿಂದ ತಕ್ಷಣ

ವಜಾ ಮಾಡತಕ್ಕದ್ದು ಎಂದು ಆದೇಶಿಸಿರುವ ಹಿನ್ನಲೆಯಲ್ಲಿ ಆರೋಪಿತ ನೌಕರರನ್ನು ತಕ್ಷಣದಿಂದ ಸೇವೆಯಿಂದ ವಜಾಗೊಳಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

ಸರ್ಕಾರ ಸುತ್ತೋಲೆ ಸಂ:ಸಿಆಸುಇ.9/ಸೇಇವಿ.95, ದಿನಾಂಕ 26-06-1996 ಮತ್ತು ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂ:770/2001, ದಿನಾಂಕ 2-08-2001ರನ್ವಯ ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದಲ್ಲಿ ಸಂವಿಧಾನದ ಭಾರತೀಯ ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವರಿ) ನಿಯಮ 1957ರ ನಿಯಮ 14(i)ರನ್ವಯ ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಹಾಗೂ ಘನ ನ್ಯಾಯಾಲಯದಲ್ಲಿ ಕ್ರಿಮಿನಲ್ ಪ್ರಕರಣದಲ್ಲಿ ದೋಷ ಸಿದ್ಧಿಯಾದಾಗ ಯಾವುದೇ ಸರ್ಕಾರಿ ನೌಕರನು ಸಾರ್ವಜನಿಕವಾಗಿ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅರ್ಹನಿರುವುದಿಲ್ಲವೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಸಂಖ್ಯೆ: EST/LOK/GC-043/13-14, ದಿನಾಂಕ 23-10-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿ. ಪೊನ್ನುರಾಜ್, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಘನ ಹಾಸನ ಜಿಲ್ಲಾ ಸತ್ರ ಮತ್ತು ವಿಶೇಷ ನ್ಯಾಯಾಲಯದ ವಿಶೇಷ ಪ್ರಕರಣ ಸಂ: 64/2006, ದಿನಾಂಕ 19-06-2012ರ ಆದೇಶ ಹಾಗೂ ಸರ್ಕಾರ ಸುತ್ತೋಲೆ ಸಂ:ಸಿಆಸುಇ.9/ಸೇಇವಿ.95, ದಿನಾಂಕ 26-06-1996 ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 9(3)ರೊಂದಿಗೆ ಓದಿಕೊಂಡ ನಿಯಮ 8(viii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ. ಆರ್. ಬಸಪ್ಪಶೆಟ್ಟಿ, ಭೂಮಾಪಕರು, ತಹಶೀಲ್ದಾರ್ ಕಛೇರಿ, ಹಾಸನ (ಹಿಂದೆ ತಹಶೀಲ್ದಾರ್, ಬೇಲೂರು) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

PR.2473

**ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ಸಂಖ್ಯೆಃ ಸಿಬ್ಬಂದಿ/ಶಿಸ್ತು/ಟ್ರ್ಯಾಪ್.10/2007-08, ದಿನಾಂಕ 08.01.2014**

ವಿಷಯಃ ಶ್ರೀ ಎನ್.ಶಿವಸ್ವಾಮಿ, ಭೂಮಾಪಕರು, ತಹಸೀಲ್ದಾರ್ ಕಛೇರಿ, ಹಾನಗಲ್ ತಾಲ್ಲೂಕು ಹಾನಗಲ್ ಇವರ ಟ್ರ್ಯಾಪ್ ಪ್ರಕರಣದಲ್ಲಿ ಆರೋಪವು ಸಾಬೀತಾದ ಹಿನ್ನೆಲೆಯಲ್ಲಿ-ಅಂತಿಮ ಆದೇಶಗೊಳಿಸುವ ಕುರಿತು.

ಉಲ್ಲೇಖಃ
1. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್ ವಿ(ಜಿ)/ಎಲ್-30/ ಸಿಆರ್-7/2007 ಹಾವೇರಿ. ದಿನಾಂಕ 17.7.2007.
2. ಈ ಕಛೇರಿ ನಡವಳಿ ಸಮ ಸಂಖ್ಯೆ ದಿನಾಂಕ: 23.7.2007.
3. ಈ ಕಛೇರಿ ನಡವಳಿ ಸಮ ಸಂಖ್ಯೆ ದಿನಾಂಕ: 11.02.2008.
4. ಈ ಕಛೇರಿ ನಡವಳಿ ಸಮ ಸಂಖ್ಯೆ ದಿನಾಂಕ: 16.02.2008.
5. ಸರ್ಕಾರದ ಆದೇಶ ಸಂಖ್ಯೆ ಕಂ.ಇ.283 ಭೂದಾಸೇ(3) 2011 ದಿನಾಂಕ:02.02.2012.
6. ವಿಶೇಷ ನ್ಯಾಯಾಧೀಶರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ ಜಿಲ್ಲೆ ಇವರ ವಿಶೇಷ ಪ್ರ.ಸಂ.2/2008 ದಿನಾಂಕ:01.08.2013.
7. ಮಾನ್ಯ ಉಚ್ಚ ನ್ಯಾಯಾಲಯ ಸಂಚಾರಿ ಪೀಠ ಧಾರವಾಡರವರ ಆದೇಶ ಸಂಖ್ಯೆ ಕ್ರಿಮಿನಲ್ ಅಪೀಲ್ ನಂ.2749/2013 ದಿನಾಂಕ: 22.08.2013.
8. ಅಪರ ಪೋಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್-(ಜಿ)ವಿ/30/ಸಿಆರ್-7/ 2007/ಹೆಚ್ ವಿಆರ್ ದಿನಾಂಕ:21.09.2013
9. ಸರ್ಕಾರದ ಸುತ್ತೋಲೆ ಸಂಖ್ಯೆಃ ಸಿ.ಆ.ಸು.ಇ.9. ಸೇಇ95 ದಿನಾಂಕ: 26.06.1996.

*ಪ್ರಸ್ತಾವನೆ:-*

ಶ್ರೀ ಎನ್.ಶಿವಸ್ವಾಮಿ, ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರು ಈ ಹಿಂದೆ ತಹಸೀಲ್ದಾರ್ ಕಛೇರಿ, ಹಾನಗಲ್ ತಾಲ್ಲೂಕು ಹಾನಗಲ್, ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ವರದಿ ದಿನಾಂಕ 17.07.2007 ರ ಪ್ರಕಾರ ತಿರಕಪ್ಪ ತಂದೆ ಬಸಪ್ಪ ಜಾವೂರ, ಹರವಿ ಗ್ರಾಮ, ಹಾನಗಲ್ಲ ತಾಲ್ಲೂಕು ರವರು ದಿನಾಂಕ 13.07.2007 ರಂದು ಹಾವೇರಿ ಲೋಕಾಯುಕ್ತ ಪೋಲೀಸ್ ಠಾಣೆಗೆ ಹಾಜರಾಗಿ ಶ್ರೀ ಎನ್. ಶಿವಸ್ವಾಮಿ, ಭೂಮಾಪಕರು, ತಹಸೀಲ್ದಾರ್ ಕಛೇರಿ, ಹಾನಗಲ್ ತಾಲ್ಲೂಕು ಹಾನಗಲ್, ಇವರ ವಿರುದ್ಧ ದೂರು ನೀಡಿ ಪಿರ್ಯಾದುದಾರರಿಗೆ ಸೇರಿದ ಜಮೀನು ರೀ ಸ.ನಂ. 29/2 ರಲ್ಲಿ2 ಎಕರೆ ಜಮೀನನ್ನು ಅಳತೆ ಮಾಡುವ ಸಲುವಾಗಿ ರೂ.2000-00 ಲಂಚ ಕೇಳಿರುತ್ತಾರೆಂದು ದೂರು ನೀಡಿದ ಮೇರೆಗೆ ಹಾವೇರಿ ಲೋಕಾಯುಕ್ತ ಪೋಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 7/2007 ಪ್ರಕಾರ ದಾಖಲಾಗಿರುತ್ತದೆ. ಆ ಪ್ರಕಾರ ದಿನಾಂಕ: 13.07.2007 ರಂದು ಲೋಕಾಯುಕ್ತ ಹಾವೇರಿ ರವರು ಬೀಸಿದ ಟ್ರ್ಯಾಪ್ ಬಲೆಯಲ್ಲಿ ಲಂಚದ ಹಣದ ಸಮೇತ ಸಿಕ್ಕಿಬಿದ್ದಿರುತ್ತಾರೆ. ಉಲ್ಲೇಖ(2)ರ ಈ

ಕಛೇರಿ ನಡವಳಿ ದಿನಾಂಕ: 23.07.2007 ರ ಆದೇಶದಲ್ಲಿ ಸದರಿ ಆರೋಪಿತ ರ ಮೇಲೆ ವಿಚಾರಣೆಯನ್ನು ಕಾಯ್ದಿರಿಸಿ ನೌಕರರನ್ನು ಅಮಾನತ್ತಿನಲ್ಲಿಟ್ಟು ಅವರು ಹೊಂದಿರುವ ಹುದ್ದೆಯ ಮೇಲಿನ ಹಕ್ಕನ್ನು ತಹಸೀಲ್ದಾರ್, ಶಿಕಾರಿಪುರ ಕಛೇರಿಗೆ ವರ್ಗಾಯಿಸಲಾಗಿರುತ್ತದೆ. ನಂತರ ಈ ಕಛೇರಿ ನಡವಳಿ ದಿನಾಂಕ: 23.07.2007 ರಲ್ಲಿ ಟ್ರ್ಯಾಪ್ ಪ್ರಕರಣದ ಇತ್ಯರ್ಥವನ್ನು ಕಾಯ್ದಿರಿಸಿ ಅಮಾನತ್ತಿನಿಂದ ತೆರವುಗೊಳಿಸಿ ತಹಶೀಲ್ದಾರ್ ಶಿಕಾರಿಪುರ ಕಚೇರಿಗೆ ಪುನರ್ ನೇಮಕಗೊಳಿಸಿರುತ್ತದೆ. ದಿನಾಂಕ: 11.02.2008 ರ ಕಛೇರಿ ನಡವಳಿಯಲ್ಲಿ ಸದರಿ ಆರೋಪಿತರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಉಲ್ಲೇಖ(8) ರ ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರ ವರದಿ ದಿನಾಂಕ: 21.09.2013 ರಲ್ಲಿ ಆಪಾದಿತರ ವಿರುದ್ಧದ ಕ್ರಿಮಿನಲ್ ಪ್ರಕರಣವು ಹಾವೇರಿ ಜಿಲ್ಲಾ ಸತ್ರ ನ್ಯಾಯಾಲಯದಲ್ಲಿ ವಿಶೇಷ ಪ್ರಕರಣ ಸಂಖ್ಯೆ 2/2008 ದಿನಾಂಕ: 01.08.2013 ರಲ್ಲಿ ಶ್ರೀ ಎನ್. ಶಿವಸ್ವಾಮಿ, ಭೂಮಾಪಕರು ಇವರ ವಿರುದ್ಧ ಆರೋಪವು ಸಾಬೀತಾಗಿದ್ದು ಆರೋಪಿಗೆ ಕಲಂ-7 ಲಂಚ ನಿರೋಧ ಕಾಯಿದೆ-1988 ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 1 ವರ್ಷ ಸಾದಾ ಶಿಕ್ಷೆ ಹಾಗೂ ರೂ.5000/- ದಂಡ, ದಂಡ ಪಾವತಿಸಲು ವಿಫಲರಾದರೆ 3 ತಿಂಗಳು ಸಾದಾ ಶಿಕ್ಷೆ ಹಾಗೂ ಕಲಂ-13(1)(ಡಿ ) ಸಹವಾಚನ-13(2) ಲಂಚ ನಿರೋದ ಕಾಯಿದೆ-1988 ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕೆ 2 ವರ್ಷ ಸಾದಾ ಶಿಕ್ಷೆ ಹಾಗೂ 10,000/- ದಂಡ, ದಂಡ ಪಾವತಿಸಲು ವಿಫಲರಾದರೆ 6 ತಿಂಗಳು ಸಾದಾ ಶಿಕ್ಷೆಯನ್ನು ವಿಧಿಸುವ ಮೂಲಕ ದಿನಾಂಕ:03.07.2013 ರಂದು ತೀರ್ಪು ನೀಡಲಾಗಿದೆಯೆಂದು. ಸರ್ಕಾರದ ಸುತ್ತೋಲೆ ಸಂಖ್ಯೆ.ಇ.ಸು.ಆ.ಸಿ:9 ಸೇಇವಿ 95 ದಿನಾಂಕ: 26.06.96 ರಲ್ಲಿ ಘನ ನ್ಯಾಯಾಲಯದಲ್ಲಿ ಆರೋಪ ಸಾಬೀತಾಗಿ ಆಪಾದಿತ ನೌಕರನಿಗೆ ಶಿಕ್ಷೆಯಾದಲ್ಲಿ ಅಂತಹ ಅಧಿಕಾರಿ /ನೌಕರರನ್ನು ಸೇವೆಯಿಂದ ತಕ್ಷಣ ವಜಾ ಮಾಡತಕ್ಕದ್ದು ಎಂದು ಆದೇಶವಿರುತ್ತದೆಂದು ಈ ಪ್ರಕರಣದಲ್ಲಿ ಆಪಾದಿತರಾದ ಎನ್. ಶಿವಸ್ವಾಮಿ, ದ್ವಿತೀಯ ದರ್ಜೆ ಭೂಮಾಪಕರು ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ಆರೋಪಿತ ನೌಕರರು ಘನ ಸತ್ರ ನ್ಯಾಯಾಲಯ, ಹಾವೇರಿ ಜಿಲ್ಲೆ ಇವರ ವಿಶೇಷ ಪ್ರ.ಸಂ.2/2008 ದಿನಾಂಕ: 01.08.2013 ರ ತೀರ್ಪಿನ ವಿರುದ್ಧ ಕರ್ನಾಟಕ ಉಚ್ಛ ನ್ಯಾಯಾಲಯ ಸಂಚಾರಿ ಪೀಠ, ಧಾರವಾಡ ನ್ಯಾಯಾಲಯದಲ್ಲಿ ಮೇಲ್ಮನವಿಯನ್ನು ಸಲ್ಲಿಸಿದ್ದು ಘನ ನ್ಯಾಯಾಲಯವು ಮೇಲ್ಮನವಿಯನ್ನು ಸ್ವೀಕರಿಸಿ ಸತ್ರ ನ್ಯಾಯಾಲಯದ ದಂಡನಾ ತೀರ್ಪಿನ ಆದೇಶವನ್ನು ಮೇಲ್ಮನವಿ ಇತ್ಯರ್ಥವಾಗುವವರೆಗೆ ಹಾಗೂ ಮೇಲ್ಮನವಿದಾರರು 30,000/- ರೂ ಬಾಂಡನ್ನು ಜಾಮೀನುದಾರರೊಂದಿಗೆ ಸಲ್ಲಿಸುವ ನಿಭಂದನೆಗೊಳಪಟ್ಟು ತಡೆಯಾಜ್ಞೆ ನೀಡಿರುತ್ತದೆ.

ಉಲ್ಲೇಖ(5) ರ ಸರ್ಕಾರದ ಆದೇಶ ದಿನಾಂಕ: 02.02.2012. ರಲ್ಲಿ ಸದರಿ ಆಪಾದಿತ ನೌಕರರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರವರಿಗೆ ವಹಿಸಲಾಗಿದ್ದು ಇಲಾಖಾ ವಿಚಾರಣೆಯು ಲೋಕಾಯುಕ್ತರವರಲ್ಲಿ ಬಾಕಿ ಇರುತ್ತದೆ.

ಈ ಟ್ರ್ಯಾಪ್ ಪ್ರಕರಣದಲ್ಲಿ ಆರೋಪಿತ ನೌಕರರಿಗೆ ಅವರ ವಿರುದ್ಧದ ಆರೋಪಗಳು ಹಾವೇರಿ ಜಿಲ್ಲಾ ಸತ್ರ ನ್ಯಾಯಾಲಯದಲ್ಲಿ ಸಾಬೀತಾಗಿ ಶಿಕ್ಷೆಯಾಗಿರುವುದರಿಂದ, ಉಚ್ಛ ನ್ಯಾಯಾಲಯದ ತೀರ್ಪು ದಿನಾಂಕ: 22.8.2013 ರ ಆದೇಶದನ್ವಯ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 9 ಸೇಇ 95 ದಿನಾಂಕ: 26.06.1996 ರಲ್ಲಿ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು-1957 ರ ನಿಯಮ-14(1) ರ ಅನುಸಾರವಾಗಿ ಸದರಿ ನಿಯಮ-11, 12 ಮತ್ತು 13 ರಲ್ಲಿ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಅರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಪುನಃ ಇಲಾಖಾ ವಿಚಾರಣೆಗೆ ಒಳಪಡಿಸದೆಯೇ ಸೇವೆಯಿಂದ ವಜಾ ಮಾಡುವ ಅಥವಾ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಎಂದು, ಅಕಸ್ಮಾತ್ ಅಪೀಲಿನಲ್ಲಿ ಆಪಾದಿತ ನೌಕರರು ಖುಲಾಸೆಯಾದಲ್ಲಿ ಅವರನ್ನು ಮತ್ತೆ ಕೆಲಸಕ್ಕೆ ತೆಗೆದುಕೊಂಡು ವಜಾಗೊಳಿಸಿದ ಆದೇಶ ಆಗದೇ ಇದ್ದಲ್ಲಿ ಲಭ್ಯವಾಗಬಹುದಾದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂದು ಆದೇಶವಿರುತ್ತದೆ. ಸರ್ಕಾರದ ಸುತ್ತೋಲೆಯ ಹಾಗೂ ಸರ್ವೋಚ್ಛ ನ್ಯಾಯಾಲಯದ ತೀರ್ಪಿನಲ್ಲಿನ ಅಂಶವನ್ನು ಪರಿಗಣಿಸಿ, ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ಧಿಯಾದ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿ. ಪೊನ್ನುರಾಜ್, ಭಾ.ಆ.ಸೇ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಹಾವೇರಿ ಘನ ಜಿಲ್ಲಾ ಸತ್ರ ನ್ಯಾಯಾಲಯವು ನೀಡಿದ ತೀರ್ಪಿನಲ್ಲಿ ಆರೋಪಿತ ನೌಕರರ ವಿರುದ್ಧ ಆರೋಪಗಳು ಸಾಬೀತಾಗಿರುವುದರಿಂದ 1957 ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ-9(3) ರಲ್ಲಿ ಓದಿಕೊಂಡ 8(viii) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್.ಶಿವಸ್ವಾಮಿ, ಭೂಮಾಪಕರು, ನಗರಮಾಪನ ಯೋಜನಾಧಿಕಾರಿಗಳ ಕಛೇರಿ, ಶಿವಮೊಗ್ಗ ಇವರನ್ನು ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಜಾಗೊಳಿಸಿ ಆದೇಶಿಸಿದ್ದೇನೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

PR.86

**ಆಯುಕ್ತರು ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ವಿಷಯ:** ಶ್ರೀ ತಿಪ್ಪೇಶ್ ನಾಯ್ಕ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಸಂಡೂರು ಇವರ ವಿರುದ್ಧದ ಟ್ರ್ಯಾಪ್ ಪ್ರಕರಣದ ಬಗ್ಗೆ-ಅಂತಿಮ ಆದೇಶ ಹೊರಡಿಸುವ ಕುರಿತು.

**ಉಲ್ಲೇಖ:** 1. ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ:ಲೋಕ್/ಐಎನ್ ವಿ(ಜಿ)ಎಂ-12/ ಸಿಆರ್-6/2013, ಉಡುಪಿ, ದಿನಾಂಕ 21-04-2010.

2. ಈ ಕಛೇರಿಯ ಆದೇಶ ಸಂ:ಸಿಬ್ಬಂದಿ.ಶಿಸ್ತು.ಟ್ರ್ಯಾಪ್.9/2009-2010, ದಿನಾಂಕ 13-08-2009 (ಅಮಾನತ್ತು), 03-04-2010 (ಅಮಾನತ್ತು ತೆರವು), ಮತ್ತು 27-08-2010 ( ಅಭಿಯೋಜನಾ ಮಂಜೂರಾತಿ).
3. ಘನ ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ಪ್ರಕರಣ ಸಂ: 33/2010, ಆದೇಶ ದಿನಾಂಕ 6-07-2013.
4. ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರದ ಸಂ:ಲೋಕ್/ಐಎನ್ ವಿ(ಜಿ)ಎಂ-12/ ಸಿಆರ್-6/2013, ಉಡುಪಿ, ದಿನಾಂಕ 13 -08-2013.

**ಪ್ರಸ್ತಾವನೆ:**

ಶ್ರೀ ತಿಪ್ಪೇಶ್ ನಾಯ್ಕ, ಭೂಮಾಪಕರು, ತಹಶೀಲ್ದಾರ್ ಸಂಡೂರು ಇವರು ಈ ಹಿಂದೆ ಕುಂದಾಪುರ ತಹಶೀಲ್ದಾರ್ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಫಿರ್ಯಾದಿದಾರರಾದ ಶ್ರೀ ದೇವದಾಸ್ ಭಂಡಾರ್ ಕರ್, ಬಿನ್ ಗಣಪಯ್ಯ ಭಂಡರ್ ಕರ್, ಶಂಕರ ನಾರಾಯಣ ಗ್ರಾಮ, ಕುಂದಾಪುರ ತಾಲ್ಲೂಕು ಇವರ ತಮ್ಮನಾದ ಶ್ರೀ ಪಾಂಡುರಂಗ ಭಂಡಾರ ಕರ್, ಇವರಿಗೆ ಸೇರಿದ ಅಂಪಾರು ಗ್ರಾಮದ ಸ.ನಂ. 336-3 ರಲ್ಲಿನ 1 ಎಕರೆ ಹಾಗೂ ಸ.ನಂ. 407/5ಪಿ3ರಲ್ಲಿನ 1 ಎಕರೆ 42 ಸೆಂಟ್ಸ್ ಜಾಗದ ಸರ್ವೆ ಕಟ್ ಮಾಡಿ ಎಸ್. ಆರ್. ಟಿ ಮಾಡಿಸಿ ಕೊಡಲು ದಿನಾಂಕ 19-05-2009 ರಂದು 1000/-ಗಳ ಲಂಚದ ಹಣಕ್ಕೆ ಒತ್ತಾಯಿಸಿದ್ದು, ದಿನಾಂಕ 20-05-2009 ರಂದು ಕುಂದಾಪುರ ತಹಶೀಲ್ದಾರ್ ಕಛೇರಿಯ ಭೂಮಾಪನ ಶಾಖೆಯಲ್ಲಿ ರೂ. 1000/-ಗಳ ಲಂಚದ ಹಣವನ್ನು ಸ್ವೀಕರಿಸಿದ ಸಮಯದಲ್ಲಿ ಲೋಕಾಯುಕ್ತರವರ ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಉಲ್ಲೇಖ (1)ರ ವರದಿಯಲ್ಲಿ ತಿಳಿಸಿರುತ್ತಾರೆ.

ಈ ಕಛೇರಿಯ ಆದೇಶ ದಿನಾಂಕ 13-08-2009ರಲ್ಲಿ ಆರೋಪಿತರನ್ನು ಅಮಾನತ್ತಿನಲ್ಲಿಟ್ಟು, ಹುದ್ದೆಯ ಮೇಲಿನ ಹಕ್ಕನ್ನು ತಹಶೀಲ್ದಾರ್, ಸಂಡೂರು ಕಛೇರಿಗೆ ಸ್ಥಳಾಂತರಿಸಲಾಗಿದ್ದು, ತದನಂತರ ಈ ಕಛೇರಿಯ ಆದೇಶ ದಿನಾಂಕ 03-04-2010ರಲ್ಲಿ ಆರೋಪಿತ ನೌಕರರ ವಿರುದ್ದ ಟ್ರ್ಯಾಪ್ ಪ್ರಕರಣದದ ಇತ್ಯರ್ಥವನ್ನು ಕಾಯ್ದಿರಿಸಿ, ಅಮಾನತ್ತಿನಿಂದ ತೆರವುಗೊಳಿಸಿ, ತಹಶೀಲ್ದಾರ್, ಸಂಡೂರು ಕಛೇರಿಗೆ ಪುನರ್ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಈ ಕಛೇರಿಯ ಆದೇಶ ದಿನಾಂಕ 27-08-2010ರನ್ವಯ ಅಭಿಯೋಜನಾ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣದ ಬಗ್ಗೆ ಘನ ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ವಿಶೇಷ ಪ್ರಕರಣ ಸಂ:33/2010, ದಿನಾಂಕ 06-07-2013ರಲ್ಲಿ ಶ್ರೀ ತಿಪ್ಪೇಶ್ ನಾಯ್ಕ, ದ್ವಿತೀಯ ದರ್ಜೆ ಭೂಮಾಪಕರು, ತಹಶೀಲ್ದಾರ್ ಕಛೇರಿ, ಸಂಡೂರು ಇವರನ್ನು ತಪ್ಪಿತಸ್ಥರೆಂದು ಪರಿಗಣಿಸಿದ್ದು, ಲಂಚ ನಿರೋಧಕ ಕಾಯ್ದೆ 1988ರ ಕಲಂ 7ರ ಅಡಿಯಲ್ಲಿನ ಆರೋಪಗಳು ಸಾಬೀತಾಗಿದ್ದಕ್ಕೆ ಸದರಿ ಆರೋಪಿತರಿಗೆ 1 ವರ್ಷದ ಸಾಧಾ ಸಜೆ ಮತ್ತು ರೂ. 2000/ ದಂಡ ಕಟ್ಟುವಂತೆಯೂ, ದಂಡ ಕಟ್ಟಲು ತಪ್ಪಿದಲ್ಲಿ ಮತ್ತೆ 1 ತಿಂಗಳು ಸಾಧಾ ಸಜೆ ಅನುಭವಿಸುವಂತೆಯೂ, ಲಂಚ ನಿರೋಧ ಕಾಯ್ದೆ 1988ರ ಕಲಂ 13(1)(ಡಿ) ರಡಿಯಲ್ಲಿನ ಆರೋಪಗಳು ಸಾಬೀತಾಗಿದ್ದಕ್ಕೆ, 2 ವರ್ಷ ಸಾದಾ ಸಜೆ ಮತ್ತು 2000/- ದಂಡ ಕಟ್ಟುವಂತೆಯೂ, ದಂಡ ಕಟ್ಟಲು ತಪ್ಪಿದ್ದಲ್ಲಿ ಒಂದು 3 ತಿಂಗಳ ಸಾಧಾ ಸಜೆ ಅನುಭವಿಸುವಂತೆಯೂ, ಶಿಕ್ಷೆ ವಿಧಿಸಿ, ತೀರ್ಪು ನೀಡಿ ಆದೇಶಿಸಿರುವ ಕಾರಣ ಉಪ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಉಲ್ಲೇಖ(3)ರ ಪತ್ರದಲ್ಲಿ ಈ ಸಜೆಗಳ ಹಿನ್ನಲೆಯಲ್ಲಿ ಭಾರತೀಯ ಸಂವಿಧಾನದ ಅನುಚ್ಛೇದ 311(2)ರ ಪ್ರವರ್ಗ, ಕೆ.ಸಿ.ಎಸ್ (ಸಿಸಿಎ) ನಿಯಾವಳಿಗಳು 1957ರ ನಿಯಮ 14 ಹಾಗೂ 10(2) ಮತ್ತು ಸರ್ಕಾರದ ಸುತ್ತೋಲೆ ಸಂ:ಸಿಆಸುಇ 9 ಸೇಇವಿ 95, ದಿನಾಂಕ 26-06-1996ರ ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂ:770/2001ರ ತೀರ್ಪಿನತ್ತ ಗಮನ ಸೆಳೆಯುತ್ತಾ ಆರೋಪಿತ ನೌಕರರನ್ನು ಕೂಡಲೇ ಸೇವೆಯಿಂದ ವಜಾಗೊಳಿಸಲು ಅಗತ್ಯ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಿರುತ್ತಾರೆ.

ಸರ್ಕಾರ ಸುತ್ತೋಲೆ ಸಂ:ಸಿಆಸುಇ.9/ಸೇಇವಿ.95, ದಿನಾಂಕ 26-06-1996 ಮತ್ತು ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂ:770/2001, ದಿನಾಂಕ 2-08-2001ರನ್ವಯ ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ, ತೀರ್ಪು ನೀಡಿದ್ದಲ್ಲಿ ಸಂವಿಧಾನದ ಭಾರತೀಯ ಸಂವಿಧಾನದ ಅನುಚ್ಛೇದ 311(2)ರ ಅಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವರಿ) ನಿಯಮ 1957ರ ನಿಯಮ 14(i)ರನ್ವಯ ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ ಹಾಗೂ ಘನ ನ್ಯಾಯಾಲಯದಲ್ಲಿ ಕ್ರಿಮಿನಲ್ ಪ್ರಕರಣದಲ್ಲಿ ದೋಷ ಸಿದ್ದಿಯಾದಾಗ ಯಾವುದೇ ಸರ್ಕಾರಿ ನೌಕರನು ಸಾರ್ವಜನಿಕವಾಗಿ ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅರ್ಹನಿರುವುದಿಲ್ಲವೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಸಂಖ್ಯೆ: EST/LOK/GC-027/13-14, ದಿನಾಂಕ 22-09-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ವಿ. ಪೊನ್ನುರಾಜ್, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಘನ ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಪ್ರಕರಣ ಸಂ:33/2010, ದಿನಾಂಕ 06-07-2013ರ ಆದೇಶ ಹಾಗೂ ಸರ್ಕಾರ ಸುತ್ತೋಲೆ ಸಂ:ಸಿಆಸುಇ.9/ಸೇಇವಿ.95, ದಿನಾಂಕ 26-06-1996 ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರ ನಿಯಮ 9(3)ರೊಂದಿಗೆ ಓದಿಕೊಂಡ ನಿಯಮ 8(viii)ರಲ್ಲಿ ಪ್ರದತ್ತವಾದ

ಅಧಿಕಾರವನ್ನು ಚಲಾಯಿಸಿ ಶ್ರೀ ತಿಪ್ಪೇಶ್ ನಾಯ್ಕ ಭೂಮಾಪಕರು, ತಹಶೀಲ್ದಾರ್ ಸಂಡೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು
ಭೂದಾಖಲೆಗಳು, ಬೆಂಗಳೂರು.

PR.2472

**ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ**

**ಕೆ.ಹೆಚ್.ಬಿ. ಬಿಲ್ಡಿಂಗ್, ಸಿಬಿಎಬಿ ಕಾಂಪ್ಲೆಕ್ಸ್, 'ಎಫ್' ಬ್ಲಾಕ್, 5ನೇ ಮಹಡಿ, ಕಾವೇರಿ ಭವನ,ಕೆ.ಜಿ.ರಸ್ತೆ, ಬೆಂಗಳೂರು–09**

**ಸಂಖ್ಯೆ: ಡಿಎಸ್‌ಕೆ/ಆರ್‌ಟಿಐ/4(1)(ಬಿ)/9/2013–14 ದಿನಾಂಕ 04.01.2014**

**ಅಧಿಸೂಚನೆ**

**ವಿಷಯ:** ಮಾಹಿತಿ ಹಕ್ಕು ಅಧಿನಿಯಮ 2005ರ ಕಲಂ 4(1)(ಬಿ) ಅನುಸಾರ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ನಿಗದಿಪಡಿಸಿದ ಕೈಪಿಡಿಗಳನ್ನು ಪ್ರಕಟಿಸುವ ಬಗ್ಗೆ.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯ, ಬೆಂಗಳೂರು ಕಛೇರಿಯು ಕೆ.ಹೆಚ್.ಬಿ. ಬಿಲ್ಡಿಂಗ್, ಸಿಬಿಎಬಿ ಕಾಂಪ್ಲೆಕ್ಸ್, 'ಎಫ್' ಬ್ಲಾಕ್, 5ನೇ ಮಹಡಿ, ಕಾವೇರಿ ಭವನ, ಕೆ.ಜಿ.ರಸ್ತೆ, ಬೆಂಗಳೂರು–09 ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದು, ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ. ಹಾಲಿ ಬೆಂಗಳೂರಿನಲ್ಲಿ ಮಾತ್ರ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ವಿವರ ಈ ರೀತಿ ಇದೆ.

**ಕೇಂದ್ರ ಕಛೇರಿ**




ಇಲಾಖೆಯ ಕಾರ್ಯ ವ್ಯಾಪ್ತಿಯು ಕರ್ನಾಟಕ ರಾಜ್ಯಕ್ಕೆ ವ್ಯಾಪಿಸಿದ್ದು, ಈ ಕಛೇರಿಯ ಅಧೀನದಲ್ಲಿ ಈ ಕೆಳಕಂಡ ಕ್ಷೇತ್ರ ಹಂತದ ಕಛೇರಿಗಳು ಇರಬೇಕೆಂದು ದಿನಾಂಕ 28.07.2011ರಲ್ಲಿ ಆದೇಶವಾಗಿದೆ. ಇನ್ನೂ ಕಾರ್ಯಾರಂಭ ಮಾಡಿರುವುದಿಲ್ಲ.

1) ಚಿಕ್ಕೋಡಿ
2) ಬಾಗಲಕೋಟೆ
3) ಬಿಜಾಪುರ
4) ಬೆಳಗಾವಿ
5) ಬೀದರ್
6) ಮಂಡ್ಯ

**4(1)(ಬಿ)(1): ಸಂಘಟನೆ**

ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶನಾಲಯದ ಮುಖ್ಯಸ್ಥರು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಹೊಸ ಆದೇಶದನ್ವಯ ಈ ಇಲಾಖೆಯ ರಚನೆ, ಕಾರ್ಯಗಳು ಮತ್ತು ಕರ್ತವ್ಯಗಳು ಈ ಕೆಳಕಂಡಂತೆ ಇರುತ್ತದೆ:–

## ಕೇಂದ್ರ ಕಛೇರಿ




## ಕ್ಷೇತ್ರ ಹಂತ



**ಕಾರ್ಯ ಚಟುವಟಿಕೆಗಳು:**

1) ಸಹಕಾರ ಸಕ್ಕರೆ ಕಾರ್ಖಾನೆಗಳ ನೋಂದಣಿ ಕಾರ್ಯ ಉಪನಿಬಂಧನೆಗಳ ಅನುಮೋದನೆ ಮತ್ತು ಬೈಲಾ ತಿದ್ದುಪಡಿ, ಕಾರ್ಖಾನೆಗೆ ಅವಶ್ಯವಿರುವ ಕಬ್ಬಿನ ಕ್ಷೇತ್ರ ನಿಗದಿಗೊಳಿಸುವುದು ಇತ್ಯಾದಿ.
2) ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಸಿಬ್ಬಂದಿ ವೃಂದ ಬಲ, ವೇತನ ನಿಗದಿಗೊಳಿಸುವ ಮತ್ತು ನೇಮಕಾತಿಗೆ ಸಂಬಂಧಪಟ್ಟಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು.
3) ಸಕ್ಕರೆ ಕಾರ್ಖಾನೆಗಳ ಪ್ರಗತಿಗೆ ಕೃಷಿ ಇಲಾಖೆ ಮತ್ತು ಕಾರ್ಖಾನೆಗಳ ಸಹಯೋಗದೊಂದಿಗೆ ಉತ್ತಮ ತಳಿಯ ಕಬ್ಬನ್ನು ಅಭಿವೃದ್ಧಿಪಡಿಸುವುದು ಮತ್ತು ಕಬ್ಬಿನ ಬೆಳೆ ಬೆಳೆಯಲು ಉತ್ತೇಜನ ನೀಡುವುದು.
4) ಕಾರ್ಖಾನೆಗಳಿಂದ ರೈತರಿಗೆ ಪಾವತಿಸಬೇಕಾದ ಕಬ್ಬಿನ ಬೆಲೆಯನ್ನು ನಿಗದಿತ ಸಮಯದಲ್ಲಿ ಪಾವತಿಸುವಂತೆ ಸಕ್ಕರೆ ಕಾರ್ಖಾನೆಗಳಿಗೆ ಸೂಕ್ತ ನಿರ್ದೇಶನ ನೀಡುವುದು.
5) ಸಕ್ಕರೆ ಕಾರ್ಖಾನೆಗಳ ಉಪ–ಉತ್ಪನ್ನಗಳಾದ ಕಬ್ಬಿನ ಸಿಪ್ಪೆ ಹಾಗೂ ಕಾಕಂಬಿ ಉಪಯೋಗಿಸಿಕೊಂಡು ಡಿಸ್ಟಿಲರಿ ಘಟಕ ಹಾಗೂ ವಿದ್ಯುತ್ ಉತ್ಪಾದನಾ ಘಟಕಗಳನ್ನು ಪ್ರಾರಂಭಿಸಲು ಉತ್ತೇಜನ ನೀಡುವುದು ಹಾಗೂ ಎಥನಾಲ್ ಉತ್ಪಾದನೆ ಮತ್ತು ಜೈವಿಕ ಗೊಬ್ಬರ ಉತ್ಪಾದನೆಯ ಬಗ್ಗೆ ತಾಂತ್ರಿಕತೆ ನೀಡುವುದು.
6) ಸಕ್ಕರೆ ಕಾರ್ಖಾನೆಗಳಿಗೆ ಅವಶ್ಯಕ ತಾಂತ್ರಿಕ ಸಲಹೆ, ಮಾರ್ಗದರ್ಶನಗಳನ್ನು ಆಗಿಂದಾಗ್ಗೆ ನೀಡುವುದು.
7) ಸಹಕಾರಿ ಸಕ್ಕರೆ ಕಾರ್ಖಾನೆಗಳಿಗೆ ಸಂಬಂಧಪಟ್ಟಂತೆ ಸರ್ಕಾರ ಹಾಗೂ ಇತರೆ ಹಣಕಾಸು ಸಂಸ್ಥೆಗಳಿಂದ ಹಣಕಾಸು ಸೌಲಭ್ಯ ಒದಗಿಸುವ ಬಗ್ಗೆ ಶಿಫಾರಸ್ಸು ಮಾಡುವುದು.
8) ರಸ್ತೆ ಅಭಿವೃದ್ಧಿ ಯೋಜನೆ ಜಾರಿಗೊಳಿಸುವುದು ಇತ್ಯಾದಿ.
9) ರಾಜ್ಯದಲ್ಲಿನ ಕಬ್ಬಿನ ಬೆಳೆ ಕ್ಷೇತ್ರ, ಉತ್ಪಾದನೆ, ಇಳುವರಿ ಅಂಕಿ–ಅಂಶಗಳನ್ನು ಕೃಷಿ ಇಲಾಖೆ, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಮತ್ತು ಸಕ್ಕರೆ ಕಾರ್ಖಾನೆಗಳಿಂದ ಕ್ರೋಢೀಕರಿಸಿ ಕೇಂದ್ರ ಸರ್ಕಾರಕ್ಕೆ ಒದಗಿಸುವುದು.

4(1)(ಬಿ)(II)

**ಅಧಿಕಾರಿಗಳು ಹಾಗೂ ಸಿಬ್ಬಂದಿ ವರ್ಗದವರ ಕರ್ತವ್ಯಗಳು:**

**I ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು:**

1) ಇವರು ಇಲಾಖೆಯ ಮುಖ್ಯಸ್ಥರಾಗಿರುತ್ತಾರೆ.
2) ಇಲಾಖೆಯ ಆಡಳಿತ ಸುಸೂತ್ರವಾಗಿ ನಿರ್ವಹಣೆ ಮಾಡುವುದು ಹಾಗೂ ಇವರ ಅಧೀನದಲ್ಲಿ ಕೆಲಸ ನಿರ್ವಹಿಸುವ ಅಧಿಕಾರಿಗಳ ಹಾಗೂ ಸಿಬ್ಬಂದಿಯ ಕಾರ್ಯನಿರ್ವಹಣೆ ಮೇಲ್ವಿಚಾರಣೆ ಮಾಡುವುದು ಹಾಗೂ ನಿಯಂತ್ರಣ ಮಾಡುವುದು.
3) ರಾಜ್ಯದಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಸ್ವೀಕೃತಿಯಾಗುವ ಅರ್ಜಿಗಳನ್ನು ಪರಿಶೀಲಿಸಿ ಅಂತರದ ದೃಢೀಕರಣ ಪತ್ರ ನೀಡುವುದು.
4) ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ಪಾವತಿ ಮಾಡುವ ರಸ್ತೆ ಕರ ಮೊತ್ತವನ್ನು ಆಧರಿಸಿ ಕಾರ್ಖಾನೆಗಳ ವ್ಯಾಪ್ತಿಯಲ್ಲಿನ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಕ್ರಿಯಾ ಯೋಜನೆ ಮಂಜೂರಾತಿ ಹಾಗೂ ಆಡಳಿತಾತ್ಮಕ ಮಂಜೂರಾತಿ ನೀಡುವುದು.
5) ಸಕ್ಕರೆ ಉದ್ಯಮದ ಹಿತದೃಷ್ಟಿಯಿಂದ ಹಾಗೂ ರೈತರ ಅಭಿವೃದ್ಧಿಗಾಗಿ ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ ಮತ್ತು ಭಾರತ ರತ್ನ ಸರ್ ಎಂ. ವಿಶ್ವೇಶ್ವರಯ್ಯ ಕಬ್ಬು ಸಂಶೋಧನಾ ಸಂಸ್ಥೆ, ಮಂಡ್ಯ ಇವುಗಳ ಮುಖಾಂತರ ಸೂಕ್ತ ಮಾರ್ಗದರ್ಶನ ಹಾಗೂ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನಗೊಳಿಸುವುದು.
6) ಸರ್ಕಾರದಿಂದ ರೈತರಿಗೆ ಹಾಗೂ ಸಕ್ಕರೆ ಕಾರ್ಖಾನೆಗಳಿಗೆ ಮಂಜೂರಾಗಿರುವ ಅನುದಾನ ಬಿಡುಗಡೆಗೆ ಕ್ರಮ ಕೈಗೊಳ್ಳುವುದು.
7) ಸಕ್ಕರೆ ಕಾರ್ಖಾನೆಗಳಿಗೆ Sugar Development Fund (SDF) ಬಿಡುಗಡೆಗಾಗಿ ಬರುವ ಪ್ರಸ್ತಾವನೆಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು.
8) ಸಹಕಾರ ಸಕ್ಕರೆ ಕಾರ್ಖಾನೆಗಳಿಗೆ ಮಂಜೂರಾಗುವ ಸಾಲ, ಅನುದಾನ ಹಾಗೂ ಇತರೆ ಸೌಲಭ್ಯಗಳ ಬಿಡುಗಡೆಗೆ ಕ್ರಮವಹಿಸುವುದು.
9) ಸಕ್ಕರೆ ಕಾರ್ಖಾನೆಗಳು ರೈತರಿಗೆ ಪಾವತಿಸಬೇಕಾದ ಕಬ್ಬು ಬಿಲ್ಲು ಬಾಕಿ ಮೊತ್ತ ಪಾವತಿಗೆ ಅನುಸರಣೆ/ ಅನುಪಾಲನೆ ಮಾಡುವುದು.
10) ಸಕ್ಕರೆ ಕಾರ್ಖಾನೆಗಳಿಗೆ ನಿಯಮಾನುಸಾರ ಪರವಾನಗಿ ನೀಡಲು ಅರ್ಜಿಗಳು ಬಂದ ನಂತರ ಸರ್ಕಾರಕ್ಕೆ ರವಾನಿಸುವುದು ಹಾಗೂ ರಾಜ್ಯಸ್ವವಾದ ಪರವಾನಗಿ ಶುಲ್ಕ ವಸೂಲಾತಿ ಮಾಡುವುದು.
11) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 29(ಸಿ), 69, 70ರನ್ವಯ ದಾಖಲಾಗುವ ಅರ್ಜಿ/ ದಾವೆಗಳನ್ನು ಇತ್ಯರ್ಥಪಡಿಸುವುದು.

**II ಸಹಕಾರ ಸಂಘಗಳ ಜಂಟಿ ನಿಬಂಧಕರು ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು:**

1. ಇಲಾಖೆಯ ಮುಖ್ಯಸ್ಥರಾಗಿರುವ ಆಯುಕ್ತರಿಗೆ ಸುಸೂತ್ರವಾಗಿ ಆಡಳಿತ ನಡೆಸಲು ಕಛೇರಿಯ ಮೇಲ್ವಿಚಾರಣೆ ಮಾಡುವುದು ಹಾಗೂ ನಿಯಂತ್ರಣ ಮಾಡುವುದು.
2. **ಶಾಸನಬದ್ಧ ಅಧಿಕಾರಗಳು:**
    (1) ಜಿಲ್ಲಾ ಮಟ್ಟಕ್ಕೆ ಸೀಮಿತವಾದ ಕಾರ್ಯವ್ಯಾಪ್ತಿ ಹೊಂದಿರುವ ಎಲ್ಲಾ ಸಹಕಾರ ಸಕ್ಕರೆ ಕಾರ್ಖಾನೆಗಳು.
    (2) ಪ್ರಾಂತೀಯ ಮಟ್ಟಕ್ಕೆ ಸೀಮಿತವಾದ ಕಾರ್ಯವ್ಯಾಪ್ತಿ ಹೊಂದಿರುವ ಎಲ್ಲಾ ಸಹಕಾರ ಸಕ್ಕರೆ ಕಾರ್ಖಾನೆಗಳು.
    (3) ತಾಲ್ಲೂಕು ಮಟ್ಟಕ್ಕೆ ಸೀಮಿತವಾದ ಕಾರ್ಯವ್ಯಾಪ್ತಿ ಹೊಂದಿರುವ ಎಲ್ಲಾ ಸಹಕಾರ ಸಕ್ಕರೆ ಕಾರ್ಖಾನೆಗಳು.
    (4) ಇತರೆ ಕಾರ್ಖಾನೆಗಳ ಕಡತಗಳನ್ನು ಟಿಪ್ಪಣಿಯೊಂದಿಗೆ ಆಯುಕ್ತರಿಗೆ ಮಂಡಿಸುವುದು.

**III ಸಿಬ್ಬಂದಿ ವರ್ಗದ ಕರ್ತವ್ಯ ಮತ್ತು ಜವಾಬ್ದಾರಿಗಳು:**

ವಿವಿಧ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರು ಶಾಖೆಯ ಕಡತಗಳ ನಿರ್ವಹಣೆ ಹಾಗೂ ಮೇಲಾಧಿಕಾರಿಗಳು ಸೂಚಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತಾರೆ.

4(1)(ಬಿ)(III)

**ಮೇಲ್ವಿಚಾರಣೆ ಮಾರ್ಗಗಳು ಮತ್ತು ತೀರ್ಮಾನ ಕೈಗೊಳ್ಳುವಲ್ಲಿ ಅನುಸರಿಸಲಾಗುವ ಕ್ರಮಗಳು:**

ಸಾರ್ವಜನಿಕರಿಂದ ಹಾಗೂ ಇತರೆ ಕಛೇರಿಗಳಿಂದ ಮತ್ತು ಅಧೀನ ಸಿಬ್ಬಂದಿಗಳಿಂದ ಮನವಿ/ ಪ್ರಸ್ತಾವ ಸ್ವೀಕೃತಿಯಾದೊಡನೆ ಪತ್ರಗಳನ್ನು "ಇಂದ" ವಹಿಯಲ್ಲಿ ನೋಂದಣಿಯಾದ ನಂತರ ವಿಷಯ ನಿರ್ವಾಹಕರು ಕಡತಗಳನ್ನು ತೆರೆದು ಅವುಗಳ ಪ್ರಾಮುಖ್ಯತೆಗೆ ಅನುಗುಣವಾಗಿ ಟಿಪ್ಪಣಿಯನ್ನು ನಮೂದಿಸಿ ಸಹಾಯಕ ನಿರ್ದೇಶಕರು/ ನಿಬಂಧಕರಿಗೆ/ ಅಧೀಕ್ಷಕರಿಗೆ ಮಂಡಿಸುತ್ತಾರೆ. ಈ ಅಧಿಕಾರಿಗಳು ಕಾನೂನಿನನ್ವಯ ವಿಷಯಗಳನ್ನು ಪರಿಶೀಲಿಸಿ ವಿಷಯದ ಪ್ರಾಮುಖ್ಯತೆಗೆ ತಕ್ಕಂತೆ ಟಿಪ್ಪಣಿಯನ್ನು ಮಂಡಿಸಿ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರಿಗೆ ಕಡತಗಳನ್ನು ಮಂಡಿಸಲಾಗುವುದು. ಕೇಂದ್ರ ಸ್ಥಾನಿಕ ಸಹಾಯಕರು ಅವರ ಹಂತದಲ್ಲಿ ವಿಲೇ ಮಾಡಬಹುದಾದಂತಹ ಕಡತಗಳನ್ನು ಪರಿಶೀಲಿಸಿ ಮುಂದಿನ ಕ್ರಮ ತೆಗೆದುಕೊಳ್ಳುವುದು. ಕೆಲವು ಕಡತಗಳನ್ನು ನಿರ್ದೇಶಕರ ಅವಗಾಹನೆ ಹಾಗೂ ಅವಶ್ಯವೆನಿಸಿದಾಗ ಸದರಿ ಕಡತಗಳನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಆದೇಶಕ್ಕಾಗಿ ಕಡತವನ್ನು ಮಂಡಿಸುತ್ತಾರೆ. ಈ ಕಡತಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಅವುಗಳ ಆದ್ಯತೆ, ವಿಶಿಷ್ಟತೆ ಅನ್ವಯ ಕಾನೂನಿನಂತೆ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಅಗತ್ಯವೆನಿಸಿದಲ್ಲಿ ಪ್ರಸ್ತಾವನೆಗಳನ್ನು ಸರ್ಕಾರದ ಮಾರ್ಗದರ್ಶನಕ್ಕಾಗಿ ಕಳುಹಿಸಲು ಕ್ರಮ ಕೈಗೊಳ್ಳುವುದು.

4(1)(ಬಿ)(IV)

**ಕಾರ್ಯಗಳ ನಿರ್ವಹಣೆಗೆ ರೂಪಿಸಿರುವ ಸೂತ್ರಗಳು:**

**ಕಛೇರಿ ಕಾರ್ಯನಿರ್ವಹಣೆಗೆ:**

| | |
|---|---|
| ಸಹಕಾರ ಸಂಘಗಳ ಜಂಟಿ ನಿಬಂಧಕರು/ ಸಹಾಯಕ ನಿಬಂಧಕರು/ ಸಹಾಯಕ ನಿರ್ದೇಶಕರು/ ಅಧೀಕ್ಷಕರು | ಪ್ರಕರಣಗಳ ಬಗ್ಗೆ ಆದ್ಯತೆಯ ಮೇಲೆ ಹಾಗೂ ತುರ್ತಾಗಿ ಕ್ರಮ ಕೈಗೊಳ್ಳುವುದು. |
| ಪ್ರಥಮ ದರ್ಜೆ ಸಹಾಯಕರು/ ಹಿರಿಯ ನಿರೀಕ್ಷಕರು/ ದ್ವಿತೀಯ ದರ್ಜೆ ಸಹಾಯಕರು | ಪತ್ರಗಳು/ ಕಡತಗಳನ್ನು ವಿಳಂಬವಿಲ್ಲದಂತೆ ಕ್ರಮ ಕೈಗೊಂಡು ವಿಲೇ ಮಾಡಬೇಕಾಗಿರುತ್ತದೆ. |
| ಶೀಘ್ರಲಿಪಿಗಾರರು/ ಬೆರಳಚ್ಚುಗಾರರು | ತಮಗೆ ವಹಿಸಿದ ಎಲ್ಲಾ ಕರ್ತವ್ಯಗಳನ್ನು ಆ ದಿನವೇ ಮುಗಿಸಿ ರಿಜಿಸ್ಟರನ್ನು ಬರೆಯ ಬೇಕಾಗಿರುತ್ತದೆ. |
| ವಾಹನ ಚಾಲಕರು | ವಾಹನವನ್ನು ಸುಸ್ಥಿತಿಯಲ್ಲಿಟ್ಟು ವಾಹನ ಚಾಲನಾ ಕಾರ್ಯ ನಿರ್ವಹಿಸಬೇಕಾಗಿರುತ್ತದೆ. |
| ಡಿ–ದರ್ಜೆ ನೌಕರರು | ಶಾಖೆಯಲ್ಲಿ ಅವರಿಗೆ ವಹಿಸಿದ ಕೆಲಸವನ್ನು ಆಯಾ ದಿನವೇ ಮುಗಿಸಬೇಕಾಗಿರುತ್ತದೆ. |

4(1)(ಬಿ)(V)

**ಇಲಾಖೆಯ ಅಧೀನಕ್ಕೆ ಒಳಪಡುವ ಅಥವಾ ಅದರ ನಿಯಂತ್ರಣಕ್ಕೆ ಒಳಪಡುವ ಅಥವಾ ಇಲಾಖೆಯ ಕಾರ್ಯನಿರ್ವಹಣೆಯಲ್ಲಿ ನೌಕರರು ಉಪಯೋಗಿಸುವ ನಿಯಮಗಳು, ನಿಬಂಧನೆಗಳು, ಸೂಚನೆಗಳು, ಕೈಪಿಡಿಗಳು ಹಾಗೂ ದಾಖಲೆಗಳು**

1) ಕಬ್ಬು (ನಿಯಂತ್ರಣ) ಆದೇಶ, 1966
2) ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959 ಹಾಗೂ ನಿಯಮ 1960
3) ಕರ್ನಾಟಕ ಶುಗರ್ (ರೆಗ್ಯುಲೇಷನ್ ಆಫ್ ಪ್ರೊಡಕ್ಷನ್) ಆರ್ಡರ್, 1975
4) ಕರ್ನಾಟಕ ಖಂಡಸಾರಿ ಮ್ಯಾನುಫ್ಯಾಕ್ಚರಿಂಗ್ ಲೈಸೆನ್ಸಿಂಗ್ ಆರ್ಡರ್, 1980

**ಕಛೇರಿ ಕಾರ್ಯಗಳ ಕಾರ್ಯನಿರ್ವಹಣೆಗೆ ಸಂಬಂಧಿಸಿದಂತೆ:**

1) ಕರ್ನಾಟಕ ನಾಗರೀಕ ಸೇವಾ ನಿಯಮಗಳು
2) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು
3) ಕರ್ನಾಟಕ ಆರ್ಥಿಕ ಸಂಹಿತೆ
4) ಕರ್ನಾಟಕ ಖಜಾನೆ ಸಂಹಿತೆ
5) ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು
6) ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು
7) ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು
8) ಕರ್ನಾಟಕ ನಾಗರೀಕ ಸೇವಾ (ಜೇಷ್ಠತೆ) ನಿಯಮಗಳು
9) ಕಛೇರಿ ಕಾರ್ಯ ವಿಧಾನ ಕೈಪಿಡಿ
10) ಸಾದಿಲ್ವಾರು ವೆಚ್ಚಗಳ ಕೈಪಿಡಿ
11) ಸರ್ಕಾರದಿಂದ ಮತ್ತು ಇಲಾಖೆಯಿಂದ ಕಾಲಕಾಲಕ್ಕೆ ಹೊರಡಿಸಿರುವ ಆದೇಶಗಳು ಮತ್ತು ಸುತ್ತೋಲೆಗಳು
12) ಅನ್ವಯವಾಗುವ ಇತರೆ ಸೇವಾ ನಿಯಮಗಳು

13) ಪಾರದರ್ಶಕ ಕಾಯ್ದೆ
14) ಮಾಹಿತಿ ಹಕ್ಕು ಅಧಿನಿಯಮ–2005
15) ಕರ್ನಾಟಕ ಸಾರ್ವಜನಿಕ ದಾಖಲೆಗಳ ಕಾಯ್ದೆ, 2012

4(1)(ಬಿ)(VI)

**ಇಲಾಖೆ ಹೊಂದಿರುವ ಅಥವಾ ನಿಯಂತ್ರಣದಲ್ಲಿರುವ ದಾಖಲೆಗಳ ವಿವರ.**

1) ಕಛೇರಿ ಲೆಕ್ಕಪತ್ರಕ್ಕೆ ನಿಗದಿಪಡಿಸಿರುವ ದಾಖಲೆಗಳು
2) ಕಛೇರಿ ಸಿಬ್ಬಂದಿ ಸೇವಾ ವಿಷಯಗಳಿಗೆ ಸಂಬಂಧಿಸಿದ ದಾಖಲೆಗಳು
3) ಪ್ರತಿ ಸಕ್ಕರೆ ಕಾರ್ಖಾನೆಯ ವೈಯಕ್ತಿಕ ಕಡತಗಳು
4) ಪ್ರತಿ ಸಕ್ಕರೆ ಕಾರ್ಖಾನೆಗೆ ಸಂಬಂಧಿಸಿದಂತೆ ಪರವಾನಗಿ ಕಡತಗಳು
5) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ನ್ಯಾಯಾಲಯದಲ್ಲಿ ದಾಖಲಾಗುವ ದಾವಾ ಅರ್ಜಿ, ಮೇಲ್ಮನವಿ ಅರ್ಜಿ ದಾಖಲೆಗಳು
6) ಕಾರ್ಖಾನೆವಾರು ರಸ್ತೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಕ್ರಿಯಾ ಯೋಜನಾ ಕಡತಗಳು
7) ಕಾರ್ಖಾನೆವಾರು ಸರ್ಕಾರದಿಂದ ಮಂಜೂರಾದ ಸಾಲ, ಅನುದಾನ, ಬಡ್ಡಿರಹಿತ ಸಾಲ ಇವುಗಳ ಕಡತಗಳು
8) ಸಹಕಾರ ಸಕ್ಕರೆ ಕಾರ್ಖಾನೆಗಳ ಲೆಕ್ಕಪರಿಶೋಧನಾ ವರದಿಗಳ ವಹಿ ಮತ್ತು ಕಡತ

4(1)(ಬಿ)(VII)

**ಇಲಾಖೆಯ ನೀತಿ ರೂಪಿಸಲು ಅದನ್ನು ಕಾರ್ಯರೂಪಕ್ಕೆ ತರಲು ಸಾರ್ವಜನಿಕರೊಂದಿಗೆ ಇಲಾಖೆಯು ಹೊಂದಿರುವ ಸಮಾಲೋಚನಾ ವ್ಯವಸ್ಥೆ ವಿವರದ ಮಾಹಿತಿ**

ಇಲಾಖೆಯು ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಸಂಬಂಧಿಸಿದಂತೆ ಅರ್ಜಿಗಳ ಪರಿಶೀಲನೆ ಮಾಡಿ ಕೇಂದ್ರ ಸರ್ಕಾರಕ್ಕೆ ಅಂತರ ದೃಢೀಕರಣ ಪತ್ರವನ್ನು ರವಾನಿಸುವ ಕಾರ್ಯ, ಸಕ್ಕರೆ ಕಾರ್ಖಾನೆಗಳು ರೈತರಿಂದ ಖರೀದಿಸುವ ಕಬ್ಬು ಬಿಲ್ಲು ಪಾವತಿ ಬಗ್ಗೆ ಪರಿಶೀಲಿಸುವುದು. ಸಕ್ಕರೆ ಕಾರ್ಖಾನೆಗಳಿಂದ ವಸೂಲಾಗುವ ರಸ್ತೆ ಕರ ಆಧರಿಸಿ ಕಾರ್ಖಾನೆಯ ವ್ಯಾಪ್ತಿಯಲ್ಲಿ ರಸ್ತೆ ಅಭಿವೃದ್ಧಿಪಡಿಸುವುದು ಇಲಾಖೆಯ ಮುಖ್ಯ ಕಾರ್ಯಗಳಾಗಿರುತ್ತದೆ. ಇಲಾಖೆಯು ಸಾರ್ವಜನಿಕರೊಂದಿಗೆ ನೇರವಾಗಿ ಯಾವುದೇ ಸಮಾಲೋಚನೆ ಮಾಡುವ ವ್ಯವಸ್ಥೆ ಹೊಂದಿರುವುದಿಲ್ಲ.

4(1)(ಬಿ)(VIII)

ಇಲಾಖೆಯ ಭಾಗವಾಗಿ ಅಥವಾ ಇಲಾಖೆಗೆ ಅಗತ್ಯವಿರುವ ಸಲಹೆಗೆ ಎರಡು ಅಥವಾ ಹೆಚ್ಚಿನ ಜನರು ಹೊಂದಿರುವ ಬೋರ್ಡ್, ಪರಿಷತ್, ಸಮಿತಿ ಅಥವಾ ಇತರೆ ನಿಗಮಗಳ ತ:ಖ್ತೆ ಹಾಗೂ ಈ ಬೋರ್ಡ್, ಪರಿಷತ್, ಸಮಿತಿ ಅಥವಾ ಇತರೆ ನಿಗಮಗಳ ಸಭೆಗಳಿಗೆ ಸಾರ್ವಜನಿಕರಿಗೆ ಪ್ರವೇಶವಿರುವುದೇ? ಅಥವಾ ಈ ಸಭೆಗಳ ನಡವಳಿ ಸಾರ್ವಜನಿಕರಿಗೆ ಲಭ್ಯವಾಗುವುದೇ?

ಇಲಾಖೆಯು ಅದರ ಭಾಗವಾಗಿ ಅಥವಾ ಇಲಾಖೆಗೆ ಅಗತ್ಯವಿರುವ ಸಲಹೆಗಾಗಿ ಯಾವುದೇ ಬೋರ್ಡ್, ಪರಿಷತ್, ಸಮಿತಿ ಅಥವಾ ಇತರೆ ನಿಗಮ ಹೊಂದಿರುವುದಿಲ್ಲ.

4(1)(ಬಿ)(IX)

ದಿನಾಂಕ 01.01.2013ರಲ್ಲಿದ್ದಂತೆ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಮತ್ತು ಸಿಬ್ಬಂದಿಗಳ ನಿರ್ದೇಶಿಕೆ:

| ಕ್ರ. ಸಂ. | ಅಧಿಕಾರಿ/ನೌಕರರ ಹೆಸರು ಶ್ರೀ/ಶ್ರೀಮತಿ | ಪದನಾಮ | ದೂರವಾಣಿ ಸಂಖ್ಯೆ |
|---|---|---|---|
| 1 | ಎಸ್.ಎಸ್. ಪಟ್ಟಣಶೆಟ್ಟಿ, ಭಾ.ಆ.ಸೇ. | ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು | 9448772946<br>080–22133390/92<br>ಫ್ಯಾಕ್ಸ್–22133391<br>ಇಮೇಲ್–<br>canecommissioner@gmail.com |
| 2 | ಬಿ. ಎಸ್. ಹರೀಶ್ | ಸಹಕಾರ ಸಂಘಗಳ ಜಂಟಿ ನಿಬಂಧಕರು ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು | 9448144406<br>080–22133390/92<br>ಫ್ಯಾಕ್ಸ್–22133391 |
| 3 | ಖಾಲಿ | ಜಂಟಿ ನಿರ್ದೇಶಕರು, ಕೃಷಿ ಇಲಾಖೆ (ಕಬ್ಬು ಅಭಿವೃದ್ಧಿ) * | |
| 4 | ಖಾಲಿ | ಜಂಟಿ ನಿರ್ದೇಶಕರು, ಕೃಷಿ ಇಲಾಖೆ (ಸಕ್ಕರೆ ತಜ್ಞರು) * | |
| 5 | ಸತ್ಯವತಿ | ಸಹಕಾರ ಸಂಘಗಳ ಸಹಾಯಕ ನಿಬಂಧಕರು | |
| 6 | ಡಿ. ರೇಖಾ | ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಸಹಾಯಕ ನಿರ್ದೇಶಕರು | |

